ಸ್ವಯಂಪ್ರಭಾ ಸಾಹಿತ್ಯ ಮಾಲೆಯ ಏಳನೆಯ




# ಚಿಗುರಿನ ಚಿ

## ( ಸಣ್ಣ ಕತೆಗಳು )

★

ಲೇಖಕರು

ಯು ನಾರಾಯಣ ಭಟ್ಟ

ಮೊದಲನೆಯ ಆವೃತ್ತಿ

೧೯೫೯

★

ಸ್ವಯಂಪ್ರಭಾ ಸಾಹಿತ್ಯ ಮಾಲೆ,

ತಾಳಗುಪ್ಪ

# ಅರ್ಪಣ

ಹೊಸಗನ್ನಡ ಸಾಹಿತ್ಯಾಕಾಶದಲ್ಲಿ

ನವ್ಯಕಾವ್ಯದ ಧ್ರುವತಾರೆಯಾಗಿ ರಾರಾಜಿಸುತ್ತಿರುವ

**ಪ್ರೊ. ಗೋಪಾಲಕೃಷ್ಣ ಅಡಿಗರಿಗೆ—**

ಬಾಲ್ಯ ಸ್ನೇಹದ ಮಧುರ ಸ್ಮರಣೆಯ

ಕುರುಹಾಗಿ

ಈ ಪುಟ್ಟ ಕೃತಿಯನ್ನು ಅರ್ಪಿಸಿದ್ದೇನೆ

—ಯು. ನಾ ಭಟ್ಟ

# ಅರಿಕೆ

ನಾನು ಸ್ವತಂತ್ರವಾಗಿ ಬರೆದ ಕತೆಗಳನ್ನೆಲ್ಲ ಒಟ್ಟುಗೂಡಿಸಿ ಪುಸ್ತಕರೂಪ ದಲ್ಲಿ ಪ್ರಕಟಿಸಬೇಕೆಂಬ ನನ್ನ ಎಂದಿನ ಆಸೆ ಇಂದು ನೆರವೇರುತ್ತಿರುವುದು ನನಗೆ ಸಂತೋಷದ ಸುಗ್ಗಿ! ಈ 'ಚಿಗುರಿನ ಚಿತ್ರ'ದಲ್ಲಿಯ ಕೆಲವು ಕತೆಗಳು ಈ ಮೊದಲೇ 'ರಾಮರಾಜ್ಯ' 'ತರುಣ' ಮೊದಲಾದ ಮಾಸಪತ್ರಿಕಗಳಲ್ಲಿ ಬೆಳಕು ಕಂಡಿವೆ 'ವಿಧವೆಯ ಹೃದಯ' ಎಂಬ ಕತೆ 'ತರುಣ'– ನಾಡಹಬ್ಬದ ಕಥಾ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದೆ

ಈ 'ಚಿಗುರಿನ ಚಿತ್ರ'ಕ್ಕೆ ನನ್ನ ಆತ್ಮೀಯ ಗೆಳೆಯರೂ ಹಿರಿಯ ಸಾಹಿತಿ ಗಳೂ ಆದ ಶ್ರೀ ಗಣಪತರಾವ ಪಾಂಡೇಶ್ವರ್ ಒಂದು ಮುನ್ನುಡಿಯನ್ನು ಇಟ್ಟು ಪೂಜಿಸಿ ಅನುಗ್ರಹ ಪ್ರಸಾದವನ್ನು ತಪ್ಪದೆ ಕಳುಹಿಸಿಕೊಟ್ಟಿದ್ದಾರೆ ಅವರಂತಹ ಯೋಗ್ಯ ಅರ್ಚಕರು ನನಗೆ ಹಾರೈಕೆಯನ್ನು ಕೋರಿ, ನುಡಿದೇವಿಯ ಅರ್ಚನೆ ನಡೆಯಿಸುವಾಗ ಸಾಹಿತ್ಯಭಕ್ತ ಕನ್ನಡಿಗರ ಅಡಿಯಾಳಾದ ನನಗೇನು ಭಯ ?

'ಚಿಗುರಿನ ಚಿತ್ರ' ವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಧಾರವಾಡದ ವಸಂತ ಮುದ್ರಣಾಲಯದ ಒಡೆಯರಿಗೂ, ಕೈಬರಹದ ಪ್ರತಿಯನ್ನು ಅಚ್ಚಿಗೆ ಕೊಟ್ಟು ಪುಸ್ತಕ ರೂಪದಲ್ಲಿ ಇಂದು ಬೆಳಕು ಕಾಣುವಂತೆ ಅಂತಃಕರಣಪೂರ್ವಕ ವಾಗಿ ಶ್ರಮಿಸಿದ ಪಾಂಡೇಶ್ವರರಿಗೂ ನನ್ನ ಚಿರಕೃತಜ್ಞತೆಗಳು ಸಲ್ಲುತ್ತವೆ

ವಾಚಕ ಮಹನೀಯರು ಮತ್ತು ಮಹಿಳೆಯರು ಈ ನನ್ನ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಪ್ರೋತ್ಸಾಹಿಸುವರಾಗಿ ನನ್ನ ದೃಢ ನಂಬಿಕೆ

ಇನ್ನು 'ಚಿಗುರಿನ ಚಿತ್ರ' ನಿಮ್ಮದು ಆದರೆ ಅದು ಕೊನೆಯವರೆಗೂ ನಿಮ್ಮದೇ ಆಗಿರಲೆಂಬ ಸದಾಶಯ ನನ್ನದು ಮುಂದೆ ನನ್ನ 'ನಿವೇದಿತಾ' ಎಂಬ ಸಾಮಾಜಿಕ ಕಾದಂಬರಿ ಅತಿ ಶೀಘ್ರದಲ್ಲಿಯೇ ಬೆಳಕು ಕಾಣಲು ನಿಮ್ಮ ಅಭಿಮಾನ, ಪ್ರೋತ್ಸಾಹ ನನಗೆ ಸಹಾಯಕವಾದೀತೆಂದು ನನ್ನ ಹಿರಿಯ ಹಂಬಲ! ದೀಪಾವಳಿಯಲ್ಲಿ ನನ್ನದೂ ಒಂದು ನೊಡರು! ಇತಿ

ತಾಳಗುಪ್ಪಾ
೧-೩-೧೯೬೦

ಕನ್ನಡ ತಾಯಿಯ ಊಳಿಗದಾಳು
**ಯು. ನಾರಾಯಣಭಟ್ಟ**

# ಮುನ್ನುಡಿ



ಶ್ರೀ ನಾರಾಯಣಭಟ್ಟ ಉಪ್ಪುಂದ ಇವರ ಈ ಪುಟ್ಟ ಕಥಾ ಸಂಗ್ರಹಕ್ಕೆ ನಾನೊಂದು ಮುನ್ನುಡಿ ಬರೆದುಕೊಡಬೇಕೆಂದು ಅವರು ಒತ್ತಾಯಿಸಿದ್ದಾರೆ 'ಮುನ್ನುಡಿ'ಗಳನ್ನೂ ಮುನ್ನುಡಿಕಾರರನ್ನೂ ಅಣಕಿಸಿ, ಟೀಕೆಯ ತೀಟೆತೀರಿಸಿ-ಕೊಳ್ಳುವ 'ವಿಡಂಬನಕಾರ'ರೇ ಹೆಚ್ಚಾಗುತ್ತಿರುವ ಈಗಿನ ಕಾಲದಲ್ಲಿ, ಎಂತಹ ಸಹೃದಯರೂ ಕೂಡಾ 'ನಮಗೇಕಪ್ಪಾ ಈ ಕೆಲಸ' ಎಂದು ಹಿಮ್ಮೆಟ್ಟುವುದೇ ಸರಿ ಆದರೂ ಶ್ರೀ ನಾರಾಯಣಭಟ್ಟರ ಮೇಲೆ ನನಗಿರುವ ನಿರ್ಮಲ ಪ್ರೇಮವು ಅವರ ಒತ್ತಾಯಕ್ಕೆ ತಲೆಬಗ್ಗುವಂತೆ ಮಾಡಿದೆ ಟೀಕಾಸ್ತ್ರಗಳನ್ನೆಲ್ಲ ಮಿತ್ರರ ಸಲುವಾಗಿ ಸಹಿಸಿಕೊಳ್ಳುವುದೇ ನನಗೊಂದು ಹೆಮ್ಮೆ ಎನಿಸುತ್ತದೆ ಆ ದೃಷ್ಟಿ-ಯಿಂದ ಈ ಕೆಲಸ ಕೈಕೊಂಡಿದ್ದೇನೆ

ಶ್ರೀ ಭಟ್ಟರನ್ನು ನಾನು ಕಳೆದ ೧೮ ವರ್ಷಗಳಿಂದೇನೋ ಬಲ್ಲವನು ಅವರು ಬಹು ಕೋಮಲ ಹೃದಯದ ರಸಿಕರು ಅನೇಕ ಪುಸ್ತಕಗಳನ್ನೋದಿ, ರಸಗ್ರಹಣಮಾಡಿಕೊಂಡವರು, ನಾಲದುದಕ್ಕೆ **"ತೆಂಗಿನ ತವರು"** ಮೊದಲಾದ ಕೆಲವು ಸುಂದರ ಪ್ರಬಂಧಗಳನ್ನು ಬರೆದು, ನುಡಿತಾಯಿಯ ಅಡಿಗಳಿಗೆ ತಮ್ಮ ಕಿರುಮುಗುಳನ್ನರ್ಪಿಸಿ, ಆಕೆಯ ಕೃಪಾಕಟಾಕ್ಷವನ್ನು ಭಕ್ತಿಯಿಂದ ಬೇಡಿಕೊಂಡ ವರು ಇಲ್ಲಿನ ಕಥೆಗಳಲ್ಲಿ, ಅವರ ಲೇಖನಶಕ್ತಿ ಹೊಸದೊಂದು ಮಿರುಗನ್ನು ಪಡೆದುದು ವ್ಯಕ್ತವಾಗುವುದು ಕತೆಯನ್ನು ಹೇಳುವುದೂ, ಕೇಳುವುದೂ, ಮನುಷ್ಯನು ಮಾತು ಬಲ್ಲವನಾದಂದಿನಿಂದಲೇ ಬಳಕೆಗೆ ಬಂದ ಒಂದು ಕಲೆ-ಯಾಗಿದೆ, ಅದು ಇಬ್ಬರಿಗೂ (ಹೇಳುವವರಿಗೂ ಕೇಳುವವರಿಗೂ) ಏಕಕಾಲಕ್ಕೇ ಸಂತೋಷವನ್ನುಂಟುಮಾಡುವ ಸದ್ವಸ್ತುವಾಗಿದೆ ಕತೆಯ ಕಲೆಯು, ಕಾವ್ಯ ಕಲೆಯಂತೆ, ಕಾಲಮಾನಕ್ಕನುಸರಿಸಿ ಅನಂತಮುಖಿಯಾಗಿ ಬಿಟ್ಟಿದೆ, ಅನಂತ ಮಾರ್ಗಾನುಸಾರಿಯಾಗಿದೆ! ಆದ್ದರಿಂದ, ಅದರ ರಸ-ರುಚಿಗಳನ್ನು ಸವಿಯುವ ರಸಿಕರ ರುಚಿಗಳೂ, ವಿಮರ್ಶಕರ ಮೀಮಾಂಸೆಗಳೂ ಅನಂತವಾಗಿವೆ

"I cannot tell how the truth may be,
I say the tale as it was said to me"

ಎಂದು ಆಂಗ್ಲ ಕಾದಂಬರಿಕಾರರ ಚಕ್ರವರ್ತಿಯಾಗಿದ್ದ ವಾಲ್ಟರ ಸ್ಕಾಟನು ಕತೆಯ ಜೀವಶಕ್ತಿಯನ್ನು ಒಂದೇ ಮಾತಿನಲ್ಲಿ ಸೂತ್ರಿಸಿರುವುದು ನೆನವಾಗುತ್ತದೆ ಅದರ ತಾತ್ಪರ್ಯವೇನೆಂದರೆ, "ಕತೆಯು ನಡೆದದ್ದು ನಿಜವೋ, ಅಲ್ಲವೋ, ನನಗೆ ತಿಳಿಯದು, ನಾನು ಹೇಗೆ ಕೇಳಿದ್ದೆನೋ ಹಾಗೆ ಹೇಳಿಬಿಡುತ್ತೇನೆ" ಇದರ ಒಳಗುಟ್ಟೇನು? ನಿಜವಲ್ಲದಿದ್ದರೂ, ನಿಜವಾಗಿರುವಂತೆ ಚಿತ್ರಿತವಾಗಿ, ಅವು ನಮ್ಮ ಮನಸ್ಸನ್ನು ಮಿಂಚಬೇಕು, ಹೃದಯವನ್ನು ಹೊಂಚಬೇಕು ಆಗಲೇ ಕತೆಯ ಉದ್ದೇಶ ಸಫಲವಾಗುವುದು ಯೇಸುಕ್ರಿಸ್ತ, ಕೃಷ್ಣ, ರಾಮರಂತಹ ವ್ಯಕ್ತಿಗಳು ಇದ್ದರೋ ಇಲ್ಲವೋ, ಆದರೂ ಅಂತಹ ಮಹಾವ್ಯಕ್ತಿಗಳನ್ನು ಚಿತ್ರಿಸಿದವರ ಕಲ್ಪನೆಯಲ್ಲಾದರೂ ಅಂತಹ ವ್ಯಕ್ತಿಗಳ ಸಂಭವನೀಯತೆ ಇದೆಯಲ್ಲ! ಕಣ್ಣಿಗೆ ಕಾಣುವ ವಸ್ತುಗಳ ಪ್ರತಿಕೃತಿ, ಕಲಾಕೃತಿಗಳನ್ನು ರಚಿಸುವಂತೆ, ಕಣ್ಣಿಗೆ ಕಾಣದವುಗಳದನ್ನೂ ರಚಿಸುವುದುಂಟು ಅಂತಹ ರಚನೆಗಳಲ್ಲಿ ಎಷ್ಟು ಜಾಗರೂಕತೆ ವಹಿಸಿದರೂ ಸಾಲದು, ರಚಿಸುವವರ ಕೂರ್ಗ್ನೋಟ–ಚಂದ್ರಲೋಕವನ್ನು ತಿವಿದ ಆಕಾಶಬಾಣದಂತೆ, ಕ್ಷಿಪಣಿಯಂತೆ–ಎಷ್ಟು ದೂರವನ್ನು ಸೀಳಿಕೊಂಡು ಹೋದರೂ ನಾಲದು

ಶ್ರೀ ಭಟ್ಟರ ಕತೆಗಳಲ್ಲಿ ಅಂತಹ ಕೂರ್ಗ್ನೋಟಕ್ಕೆಡೆಯಿಲ್ಲ ಎಲ್ಲ ಕತೆಗಳೂ ನಿತ್ಯಜೀವನ ಪರಿಸರದಲ್ಲಿ ಮಿಂಚಿಮಾಯವಾಗುವ ಅನೇಕಾನೇಕ ಸಾಮಾನ್ಯ ಜೀವಿಗಳನ್ನೇ ಕುರಿತವು "ವಿಧವೆಯ ಹೃದಯ" "ಪಶ್ಚಾತ್ತಾಪ ಪುನೀತ" "ಪಾಪದ ಫಲ", ಈ ಮೂರು ಕತೆಗಳು ಅತ್ಯಂತ ಚಿತ್ತಾಕರ್ಷಕವಾಗಿದ್ದು, ಅವರ ಕಥಾಕಲೆಯ ಉತ್ತಮ ಫಲಗಳಾಗಿವೆ ಇಂತಹವುಗಳು ಎಷ್ಟಿದ್ದರೂ ಬೇಕೆನಿಸುತ್ತನೆ

"A story should, to please at least, seem true,
Be apropos, well told, concise and new,
And whensoever it deviates from these rules,
The wise will sleep and leave applause to fools"

ಎಂದೊಬ್ಬ ಆಂಗ್ಲ ಕವಿ ಸಣ್ಣ ಕತೆಗಳ ಗುಣಲಕ್ಷಣಗಳನ್ನು ಸೂಚಿಸಿರುವುದನ್ನು ಸ್ಮರಿಸಿಕೊಂಡು ಈ ಪುಟ್ಟ ಮುನ್ನುಡಿ ಮುಗಿಸುತ್ತೇನೆ ಕತೆಯು ರುಚಿಸ-

ಬೇಕಾದರೆ, ವಾಸ್ತವಿಕವಾಗಿ ತೋರಬೇಕು, ಸಮಯೋಚಿತವಾಗಿರಬೇಕು, ಮಿತವಾಗಿರಬೇಕು, ಮನಸ್ಸಿಗೆ ಹಿಡಿಯುವ ಶೈಲಿಯಲ್ಲಿರಬೇಕು, ಇವುಗಳಿಗೆ ಕೊರತೆಯಾದಲ್ಲಿ, ಬುದ್ಧಿವಂತರು ತೂಕಡಿಸಿ, ಹೊಗಳುವ ಕೆಲಸವನ್ನು ದಡ್ಡರ ಪಾಲಿಗೆ ಬಿಟ್ಟುಕೊಡುತ್ತಾರೆ ಶ್ರೀ ಭಟ್ಟರ ಕತೆಗಳಲ್ಲಿ ವಾಸ್ತವಿಕತೆ ಇದೆ, ಸಮಯೋಚಿತತೆ ಇದೆ, ಮಿತವಿದೆ, ಹೇಳುವ ಶೈಲಿ ಇದೆ ಅವುಗಳಿಗೆ ಕೊರತೆ ಬಂದ ಕತೆಗಳ ಬಗ್ಗೆ ಮೌನವಾಗಿದ್ದು, ಕೊರತೆ ಇಲ್ಲದವುಗಳನ್ನು ಹೊಗಳಿದರೆ ಸಾಕು ನಾನು ಮಾಡಿರುವುದು ಅದನ್ನೇ ಶ್ರೀ ಭಟ್ಟರ ಕೈಬರೆಹದ ಉಳಿದ ಕಥೆ-ಕಾದಂಬರಿಗಳೂ ಬೆಳಕಿಗೆ ಬಂದು, ನಾಡದೇವಿಯ ದೀಪಾವಳಿಯಲ್ಲಿ ಅವರ ಸೊಡರೂ ಬೆಳಗಲಿ, ನಾಡ ಬಾನಿನ ತಾರಾವಳಿಯಲ್ಲಿ ಅವರ ತಾರೆಯೂ ತೊಳಗಲಿ!

ಧಾರವಾಡ
೨೦-೧೦-೧೯೫

ಇತಿ
ಜಿ ಆರ್ ಪಾಂಡೇಶ್ವರ್

# ಪರಿವಿಡಿ







# ಸುಕುಮಾರ ಸುಮ

ಆತನಿಗೆ ಮಿಡ್ಲ್‌ಸ್ಕೂಲ್‌ನಲ್ಲಿ ಶಿಕ್ಷಣ ಮುಗಿಯಿತು ಇನ್ನು ಬೇಸಿಗೆಯ ರಜೆ ಕಳೆದ ನಂತರ ಹೈಸ್ಕೂಲ್ ಸೇರಲು ಕಮಲಾಪುರಕ್ಕೆ ಹೋಗಬೇಕೆಂದಾಸೆ ಅಲ್ಲಿಯ ಒಬ್ಬರು ವಕೀಲರು ಆತನನ್ನು ತಮ್ಮಲ್ಲಿಯೇ ಇಟ್ಟುಕೊಂಡು ಓದಿಸುವುದಾಗಿ ವಚನವಿತ್ತಿದ್ದರು ಬಡವರಾದರೂ ಒಳ್ಳೆಯ ಗುಣವನ್ನು ಹೊಂದಿದ್ದರೆ ಎಲ್ಲರಿಗೂ ಪ್ರೀತಿ ಸುಕುಮಾರನ ತಾಯಿ–ತಂದೆ ತುಂಬಾ ಬಡವರು ಅವರ ಬಡತನದ ಕೆಸರಿನಲ್ಲಿ ಸುಕುಮಾರನೆಂಬ ಕಮಲ ಮೂಲಾನಕ್ಷತ್ರದಿಂದ ರಿಷ್ಟಾಂಶದೊಳು ಸುಕುಮಾರನು ಎಂಬಂತೆ ಚಂದ್ರಹಾಸ ಹುಟ್ಟಲಿಲ್ಲವೇ ? ಸುಕುಮಾರ ಹುಟ್ಟಿದ್ದೂ ಮೂಲಾನಕ್ಷತ್ರದಲ್ಲಿಯೇ, ತಂದೆಗೆ ಸಾಲವಾಯಿತು ಆತ ಮನೆಮಾರು ಕಳೆದುಕೊಂಡು ಊರು ಬಿಟ್ಟನು ನಂತರ ರಾಮಪುರದಲ್ಲಿ ಬಂದು ದಂಪತಿಗಳು ನೆಲೆಸಿದರು ಸುಕುಮಾರ ಬೆಳೆದು ದೊಡ್ಡವನಾದ ಆತನಿಗೆ ಅಕ್ಕ ಪಕ್ಕದ ಮನೆಯವರ ಉದಾರಾಶ್ರಯ, ಧನಸಹಾಯದಿಂದ ಹೇಗೋ ಮಿಡ್ಲ್‌ಸ್ಕೂಲ್ ಶಿಕ್ಷಣ ಮುಗಿಯಿತು ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ತೇರ್ಗಡೆ ಹೊಂದಿದನು ಎಲ್ಲಾ ಉಪಾಧ್ಯಾಯರಿಗೂ ಎಣೆಯಿಲ್ಲದಷ್ಟು ಸಂತೋಷ ‘ ಶಿಷ್ಯ ನಿದ್ದರೆ ಇಂತಹ ಚುರುಕು ಹುಡುಗನಿರಬೇಕು ಎಲ್ಲ ಹುಡುಗ ಹುಡುಗಿಯರೂ ಓದುವವರೇ, ಏನು ಓದಿ ಏನು ಬಂತು, ಗುಡ್ಡಕ್ಕೆ ಮಣ್ಣು ಹೊತ್ತಷ್ಟೇ ಪ್ರತಿಫಲ ! ’ವೆಂದು ಅವರು ಉದ್ಗಾರ ತೆಗೆದರು ಆ ವರ್ಷ ತೇರ್ಗಡೆಹೊಂದಿದ ವಿದ್ಯಾರ್ಥಿ (ನಿ) ಗಳ ಪೈಕಿ ಸುಕುಮಾರನಂಥವರು ನಾಲ್ಕಾರು ಮಂದಿಯಾದರೂ ಮುಂದೆ ಆಧುನಿಕ ಭಾರತದ ಭಾವೀ ಉಜ್ವಲ ಭವಿಷ್ಯದ ರೂಪರೇಷೆಗಳನ್ನು ಚಿತ್ರಿಸುವವರಾಗುವರೆಂದು ಆ ಶಾಂತಿನಿಕೇತನ ಮಿಡ್ಲ್‌ಸ್ಕೂಲ್ ಉಪಾಧ್ಯಾಯರ ಅಭಿಪ್ರಾಯವಾಗಿತ್ತು ಹಿರಿಯರ ಮಾತು ಸುಳ್ಳಾಗುವುದೇ ? ಸುಕುಮಾರ, ರಾಧಾಕೃಷ್ಣ, ತುಳಸೀ, ಯಮುನಾ, ಸೈಯದ್‌ಹುಸೇನ್, ಗೊನ್ಸಾಲ್ವಿಸ್, ಮೇರಿ, ಶಿವರಾವ್– ಇವರೆಲ್ಲರೂ ತಾರಾಗಣ ಒಬ್ಬ ನೆಹರು, ಇನ್ನೊಬ್ಬ ರಾಧಾಕೃಷ್ಣನೆ, ಮತ್ತೊಬ್ಬ ಸಿ ವಿ ರಾಮನ್, ತುಳಸಿ– ವಿಜಯಲಕ್ಷ್ಮಿಪಂಡಿತ ಯಮುನಾ– ಅಮೃತಕುವರಿ, ಹೀಗೆ ಆದರ್ಶ ವ್ಯಕ್ತಿಗಳಾಗುವರೆಂದು ಉಪಾಧ್ಯಾಯರ ಊಹಾಪೋಹ ನಮ್ಮ ನಮ್ಮ ಹಿರಿಯರು– ಅವರು ಯಾರೇ

ಆಗಿರಲಿ, ತಾಯಿಯೋ ತಂದೆಯೋ ಗುರುವೋ– ನಮ್ಮ ಕಿರಿಯವರ ಬಳಗದ ಮೇಲೆ ಅಷ್ಟೊಂದು ಆಶಾಬಲವನ್ನಿಡುತ್ತಾರಲ್ಲ– ಅದೇ ನಮ್ಮ ಸರ್ವಶ್ರೇಯಸ್ಸಿಗೆ ಬಲವರ್ಧಕವಾದೊಂದು ಶಕ್ತಿ !

ಉಪಾಧ್ಯಾಯರೂ ವಿದ್ಯಾರ್ಥಿಗಳೂ ಕುಳಿತುಕೊಂಡು ಒಂದು ಗ್ರೂಪ್ ಫೋಟೊ ತೆಗೆಯಿಸಿದರು. ಇಷ್ಟು ಸುಂದರ ವಾತಾವರಣವನ್ನು ಬಿಟ್ಟು, ಮುಂದೆ ಹೈಸ್ಕೂಲ್ ಶಿಕ್ಷಣಕ್ಕೆ ಪರವೂರಿಗೆ ಹೋಗಬೇಕೆಂದೆಣಿಸಿದಾಗ, ವಿದ್ಯಾರ್ಥಿಗಳೆಲ್ಲರಿಗೂ ಕಣ್ಣಿನಲ್ಲಿ ನೀರು ತುಂಬಿತು. ಸ್ನಿಗ್ಧ ಹೃದಯದ ಆ ಮುಗ್ಧ ಬಾಲಕ ಬಾಲಕಿಯರಿಗೂ ಹುಟ್ಟಿದ ಊರೆಂದರೆ ಎಂತಹ ಪ್ರೇಮ! ಅವರ ಹೃದಯದ ಮಿಡಿತವೆಷ್ಟು! ಅಗಲುವ ಆ ಎಳೆಯರ ಕಣ್ಣೀರಿನೊಡನೆ ಉಪಾಧ್ಯಾಯರು ತಮ್ಮದಷ್ಟು ಕೂಡಿಸಿದರು. ಮತ್ತೇನುಮಾಡುತ್ತಾರೆ? ಮುಂದಿನ ಶಿಕ್ಷಣವು– ಕಲಿಯಬೇಕೆನ್ನುವವರಿಗೆ ಅನಿವಾರ್ಯ. ಅಂತೂ ಒಂದು ಸುಪ್ರಭಾತದ ದಿನ ಗೂಡಿನಿಂದ ಹಕ್ಕಿಗಳೆಲ್ಲ ಹೊರಗೆ ಹಾರಿದವು. ........ ಆ ಎಳೆಯ ಕನಸುಗಳು !

ಸುಕುಮಾರ ಪ್ರಭಾತ್ ಹೈಸ್ಕೂಲಿಗೆ ಸೇರಿದನು. ವಾರಾನ್ನವನ್ನು ನಾನು ಕೊಡುತ್ತೇನೆ, ನಾನು ಕೊಡುತ್ತೇನೆ– ಎಂದು ಕಮಲಾಪುರದ ಪ್ರತಿಷ್ಠಿತ ಜನರೆಲ್ಲರೂ ಮುಂದಾದರು. ಆತನು ಬಡವನೆಂದು ಶಾಲೆಯಲ್ಲಿ ತಿಂಗಳು ತಿಂಗಳಿನ ಶುಲ್ಕವನ್ನೇ ಕೊಡಬೇಕಾಗಿರಲಿಲ್ಲ. ಒಳ್ಳೆಯ ಸ್ನೇಹಿತರ ಸಹಾಯವೂ ಒದಗಿತು. ಸುಕುಮಾರನ ಓದು ಯಾವ ತೊಂದರೆಯೂ ಇಲ್ಲದೆ ಸಾಗತೊಡಗಿತು.

* * * *

ಪ್ರಭಾಕರರಾಯರು ಮೊದಲು ಸರ್ಕಾರದ ಉನ್ನತ ಹುದ್ದೆಯಲ್ಲಿದ್ದು, ಆ ಮೇಲೆ ಪೆನ್‌ಶನ್ ಪಡೆಯುತ್ತಿದ್ದು, ಕಮಲಾಪುರದಲ್ಲಿಯೇ ಜಮೀನು ಸಂಪಾದಿಸಿ, ಮನೆ ಕಟ್ಟಿಕೊಂಡು, ಹೆಂಡತಿ ಮಕ್ಕಳೊಡನೆ ವಾಸಿಸುತ್ತಿದ್ದರು. ಮಕ್ಕಳೆಂದರೆ ನಾಲ್ಕಾರಲ್ಲ, ಒಬ್ಬಳೇ ಒಬ್ಬಳು ಮಗಳು– ಸುಮ. ಹೆಸರಿಗೆ ತಕ್ಕ ಹೂವೇ ಆಗಿದ್ದಳವಳು. ...... ಕಿಶೋರಿ ! ತಾಯಿ ಶಾರದಮ್ಮನಿಗೆ ಸುಮತಿ. ಎಂದರೆ ಮಮತೆಗೆ ಮೇರೆಯೇ ಇರಲಿಲ್ಲ. ಸುಮಳ ನಿಜವಾದ ಹೆಸರು: ಸುಮತಿ. ಎಲ್ಲರೂ ಸುಮ, ಸುಮ ಎಂದು ಕರೆದು ಕೊನೆಗೆ ಅದೇ ಸ್ಥಿರವಾದ ಹೆಸರಾಯಿತು. ಅವಳೂ ಹೈಸ್ಕೂಲ್‌ನಲ್ಲಿ ಓದುತಿದ್ದಳು. ಸುಕುಮಾರ ಪ್ರಭಾಕರರಾಯರಲ್ಲಿಯೇ

ಇದ್ದ ರಾಯರು ಜನರ ಗುಣಾವಗುಣಗಳನ್ನು ಪರೀಕ್ಷಿಸುವುದರಲ್ಲಿ ಕುಶಾಗ್ರಮತಿ, ಕೇವಲ ಮುಖಾವಲೋಕನದಿಂದಲೇ– ಈ ವ್ಯಕ್ತಿ ಹೀಗೆ, ಆ ವ್ಯಕ್ತಿ ಹಾಗೆ–ಎಂದು ಅವರಲ್ಲಿರುವ ಡೊಂಕುಗಳನ್ನೆಲ್ಲ ಹೇಳಿಬಿಡುತಿದ್ದರು ಬಹಳ ಸಂಶಯಪ್ರಕೃತಿ ಅವರದು ಎರಡನೆಯ ಮದುವೆಯಾದುದರಿಂದ ಹೆಂಡತಿ ಶಾರದ ಇನ್ನೂ ಎಳೆಯ ತರುಣಿ ಮಗಳಂತೂ ವಸಂತಪ್ರಸೂತ ನವಪಲ್ಲವ ಈ ಎರಡು ಹೂಗಳ ಮೇಲೆ ಬೇರೆಯವರ ದೃಷ್ಟಿ ಬಿದ್ದರೇನುಗತಿ ? ಸುಕುಮಾರನಿನ್ನೂ ಹದಿನಾರುವರ್ಷದ ಹುಡುಗ ಅವನ ವಿಷಯದಲ್ಲೇನೂ ಭಾವಿಸುವುದು ಶಕ್ಯ ವಲ್ಲ ಮತ್ತು ಕಾರಣವೂ ಇಲ್ಲ ಸುಮೆಗೆ ಹದಿನಾಲ್ಕು ವರ್ಷ, ದಿನ ಬೆಳಗಾದರೆ ಮದುವೆಗೆ ನೆರೆದ ಹುಡುಗಿ ಸಾರಸ್ವತ ಸಮಾಜದಲ್ಲಿ ಹೆಣ್ಣು ಮಕ್ಕಳಿಗೆ ಮದುವೆ ಮಾಡಲು ಅವರ ಜನರಿಗೆ ಅವಸರವಿಲ್ಲ ಹುಡುಗ ಅಥವಾ ಹುಡುಗಿಯ ವಯ ಸ್ಸಿನ ಪ್ರಶ್ನೆ ಅವರಿಗೆ ಗೌಣ ಮುಖ್ಯ ವಿದ್ಯೆ ಮತ್ತು ಗುಣಕ್ಕೆ ಅವರು ಹೆಚ್ಚು ಪ್ರಾಧಾನ್ಯತೆ ಕೊಡುವುದುಂಟು ನಮ್ಮ ಬ್ರಾಹ್ಮಣ ಸಮಾಜ ಇದಕ್ಕೆ ತದ್ವಿರುದ್ಧ, ಬಹುಶಃ ಹೆಣ್ಣು ಗಂಡಿನ ನಾಲಾವಳಿಯೇ ಸಮರ್ಪಕವಾಗಿ ನಡೆಯುವದಿಲ್ಲವೆನ್ನ ಬಹುದು ಒಂದು ಹುಡುಗಿಗೆ ಎಂಟು ಅಥವಾ ಹತ್ತು ವರ್ಷವಾದರೆ ಅವಳಿಗೆ ಮದುವೆ ! ಮದುವೆಯ ಉದ್ದೇಶವೇನು ? ಯಾರನ್ನು ಯಾರಿಗೆ ಮದುವೆ ಮಾಡಿಕೊಡಬೇಕು ? ಯಾವ ವಯಸ್ಸಿನಲ್ಲಿ ? ಯಾವುದನ್ನೂ ಯೋಚಿ ಸುವುದಿಲ್ಲ ಇತರ ಸಮಾಜದಲ್ಲಿಯ ಎಷ್ಟೋ ಮಂದಿ ನಮ್ಮ ಸಮಾಜದಲ್ಲಿಯ ಮದುವೆ ಗೊಂಬೆಯಾಟವನ್ನು ನೋಡಿ ನಗುತ್ತಾರೆ ಅದೇ– ಸಾರಸ್ವತರ ಆಹಾರ–ವಿಹಾರ ವ್ಯವಹಾರ ನೀತಿ ಸಂಪ್ರದಾಯಗಳನ್ನು ನೋಡಿದರೆ ನಾವು ತಲೆ ತಗ್ಗಿಸದೆ ವಿಧಿ ಇಲ್ಲ ಅವರ ಹೆಂಗಸರು ಕೇವಲ ಬಣ್ಣದ ಗೊಂಬೆಗಳಲ್ಲ ತುಂಬಾ ಓದಿಕೊಂಡಿದ್ದಾರೆ ನಮ್ಮ ಹೆಂಗಸರು ಮಾತ್ರ ವರ್ಷಕ್ಕೊಂದು ಮಗು ಹಡೆಯುವದರಲ್ಲಿಯೇ ಮುಕ್ತಿ ಕಾಣುತ್ತಲಿದ್ದಾರೆ ಗಂಡಸರ ಅವಿವೇಕ ದಿಂದ ಇನ್ನೊಂದು ಕಡೆ ಬಾಲ ವಿಧವೆಯರ ಗೋಳು !

ಇರಲಿ ಜಾತಿಗೊಂದು ನೀತಿ ಇರುವಾಗ ಯಾರಿಗೇನು ಮಾಡಲು ಸಾಧ್ಯ ? ಸುಕುಮಾರನನ್ನು ಪ್ರಭಾಕರರಾಯರು ಸುಮೆಯಂತೆ ಇನ್ನೊಬ್ಬ ಮಗನೆಂದೇ ಭಾವಿಸಿದರು ಸುಮೆಯೂ ಕುಶಲಮತಿ ಸುಕುಮಾರ, ಸುಮೆಗೆ ಯಾವಾಗಲೂ ಒಟ್ಟಿಗೆ ಊಟ, ಪಾಠ, ಶಾಲೆಗೆ ಹೋಗುವಾಗಲೂ ಒಡನಾಡಿ- ಗಳು ಇನ್ನಿತರ ಹುಡುಗರಿಗೆ ಈ ಜೊತೆಯನ್ನು ನೋಡಿ ಮಾತ್ಸರ್ಯವು

ವಿಷದಂತೆ ಉಕ್ಕುತ್ತಿತ್ತು ಸುಮೆಯ ಗೆಳತಿಯರು 'ಸುಮಾ, ಸುಕುಮಾರನನ್ನು ಮದುವೆಯಾಗ್ತಿಯೇಕೆ" ಎಂದು ಚೇಷ್ಟೆ ಮಾಡುತ್ತಿದ್ದರು ಸುಕುಮಾರನ ಗೆಳೆಯರು, 'ಸುಕುಮಾರಾ, ಸುಮೆಯನ್ನು ನೀನು ಮದುವೆಯಾಗ್ತಿಯಂತೆ, ಹೌದೆ" ಎಂದು ಕೇಳಿ ಆತನಿಂದ ಉತ್ತರ ಬರುವವರಗೂ ಆತನನ್ನು ಗೋಳಾಡಿಸುತ್ತಿದ್ದರು

* * * *

ಸುಕುಮಾರ ಬಿಡುವಿನ ವೇಳೆಯಲ್ಲಿ ತಂದೆ-ತಾಯಿಗೆ ತನ್ನ ಕ್ಷೇಮ ಸಮಾಚಾರಗಳ ಕುರಿತು ಪತ್ರ ಬರೆಯುತ್ತಿದ್ದನು ಅವರಿಗೆ– ಮಗನು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಆದಷ್ಟು ಬೇಗ ಬಂದು ಚಾಕರಿಯನ್ನು ಸಂಪಾದಿಸಿ, ಒಳ್ಳೆಯ ಮನೆತನದ ಹುಡಿಗೆಯನ್ನು ಮದುವೆ ಮಾಡಿಕೊಂಡು ಸುಖದಿಂದ ಬಾಳುವೆ ಮಾಡುವುದನ್ನು ನೋಡಬೇಕೆಂದಾಸೆ ಸುಕುಮಾರನ ಅಕ್ಕ ವೃಂದೆಗೂ ಅದೇ ಬಯಕೆ ಆಕೆಗೆ ಹದಿನಾಲ್ಕು ವರ್ಷ ವಯಸ್ಸಿನಲ್ಲಿ ಮೊದಲನ ಹೆಂಡತಿಯನ್ನು ಕಳೆದುಕೊಂಡ ವಿಧುರನೊಡನೆ ಮದುವೆಯಾಗಿತ್ತು ಆತನ ವಯಸ್ಸು ನಲ್ವತ್ತಕ್ಕೆ ಮೀರಿತ್ತು ಗಂಡ-ಹೆಂಡತಿಯ ದಾಂಪತ್ಯ ಪ್ರೇಮ ಸುಖವೇನೆಂದು ನೆರೆಹೊರೆಯವರಿಗೂ ತಿಳಿಯದು ಆತನಿಗೆ ಹೆಂಡತಿಯಲ್ಲಿಯೂ ತೃಪ್ತಿ ಇಲ್ಲದೆ ವ್ಯಭಿಚಾರಿಣಿ ಯಾರೆಂದು ಶೋಧನಾಯಾತ್ರೆ ನಡೆಯಿಸಿದ್ದನು ಕೊನೆಗೊಂದು ದಿನ, ಹೆಂಡತಿಗೂ ಊರಿನ ಜನರಿಗೂ ಬೇಡವಾಗಿ, ಕಾಲನ ಕರೆಗೆ ಓಗೊಟ್ಟು, ಅವನೂರಿಗೆ ಪಯಣ ಬೆಳೆಯಿಸಿದನು ವೃಂದೆ ಈಗ ವಿಧವೆ ಇನ್ನೂ ಇಪ್ಪತ್ತು-ಇಪ್ಪತ್ತೆರಡರ ವಯಸ್ಸಿನವಳು ವೈಧವ್ಯದಂತಹ ಅಸಹನೀಯ ಯಾತನೆಯನ್ನು ಆ ಹೆಂಗರಳು ಸಹಿಸಿಕೊಂಡಿರಬೇಕಾದರೆ, ಅವಳಿಗೆ ತಾಳ್ಮೆ ಎಷ್ಟಿರಬೇಡ! ಗಂಡನ ಮನೆಯಿಂದ ಆಕೆಗೆ ಒಂದು ಒಡಕು ಕವಡೆಯೂ ಸಿಗಲಿಲ್ಲ ಜೀವನಕ್ಕೆ ದೇವರೇ ಗತಿ ತಮ್ಮನೆಂದರೆ ಪ್ರಾಣ ವೃಂದೆಗೆ ಅವಳ ದಿನನಿತ್ಯದ ಕಾರ್ಯವೆಂದರೆ– ನೂಲು ತೆಗೆಯುವುದು ಬಡವರ ಮಕ್ಕಳಿಗೆ ವಿದ್ಯೆ ಹೇಳುವುದು, ಕತೆ-ಕಾದಂಬರಿಗಳನ್ನು ಬರೆಯುವುದು– ಇವೇ ಆಗಿದ್ದವು

ಮನೆಯ ಎದುರಿಗೊಂದು ವೃಂದಾವನ ಅದು ವೃಂದೆಯ ಪರಿಶ್ರಮದ ಫಲ ತುಳಸಿ ಹುಲುಸಾಗಿ ಬೆಳೆದಿತ್ತು ಆ ಕಟ್ಟೆ, ಆ ರಂಗವಲ್ಲಿ, ಸಾರಣೆ-ಕಾರಣೆ ಎಲ್ಲವೂ ವೃಂದೆಯ ಕೈಚಳಕ

ಸುಕುಮಾರ ಮತ್ತು ಸುಮ ಇಬ್ಬರೂ ಎಸ್ ಎಸ್ ಎಲ್ ಸಿ ಪರೀಕ್ಷೆ ಯಲ್ಲಿ ತೇರ್ಗಡೆ ಹೊಂದಿದರು ಸುಕುಮಾರನು ಮಾತ್ರ ಪ್ರಪ್ರಥಮನಾಗಿ ತೇರ್ಗಡೆ ಹೊಂದಿದ್ದನು ಮುಂದೆ ಕಾಲೇಜಿನಲ್ಲಿ ಓದಲು ಆತನಿಗೆ ಶಿಷ್ಯವೃತ್ತಿ ದೊರಕಿತು ಪ್ರಭಾಕರರಾಯರಿಗೂ ಶಾರದಮ್ಮನಿಗೂ ಎಣೆಯಿಲ್ಲದಷ್ಟು ಸಂತೋಷ ಅದೇ ವರುಷ ಸುಕುಮಾರ ಸುಮೆಯರ ವಿವಾಹವೂ ವಿಜೃಂಭಣೆ ಯಿಂದ ನೆರವೇರಿತು ಮುಂದೆ ಕಾಲೇಜ್ ವ್ಯಾಸಂಗಕ್ಕೆ ತಾನೂ ಸಹಾಯ ಮಾಡುವುದಾಗಿ ಅಭಯವಚನವಿತ್ತರು ಪ್ರಭಾಕರರಾಯರು ಈಗ ಹೆಣ್ಣು ಕೊಟ್ಟ ಮಾವನಲ್ಲವೇ ? ವಧೂವರರ ಗೃಹಪ್ರವೇಶದ ದಿನ ಬಡವರ ಮನೆಗೆ ಹೇಗೆ ಈ ಹುಡುಗಿಯನ್ನು ಕರೆದುಕೊಂಡು ಹೋಗುವುದೆಂದು ಸುಕುಮಾರನ ಸಂಕೋಚ ! ಹುಲ್ಲಿನ ಗುಡಿಸಲು ಆದರೆ ಸುಮೆಗೆ ಮಾತ್ರ– 'ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆಯುವ' ಗಂಡನ ತವರೂರನ್ನು ಕಣ್ಣುತುಂಬಾ ನೋಡಿ ನಲಿಯಬೇಕೆಂದು ಹಿರಿಯಾಸೆ ಅವಳಿಗಿಲ್ಲದ ಸಂಕೋಚ ಇವನಿಗೆಲ್ಲಿಂದ ಬಂದಿತು ? ಕೊನೆಗೆ ರಾಮಪುರಕ್ಕೆ ಹೋಗುವ ದಿನ ನಿಶ್ಚಯ ವಾಯಿತು ಶ್ರೀಮಂತ ಪುತ್ರಿಗೆ ಅದೆಷ್ಟು ಸಡಗರ ಗಂಡನ ಮನೆಗೆ ಹೋಗುವು ದೆಂದರೆ ! ಆಶಾಂತಿ ಚಿರಶಾಂತಿಯ ತಾಣವಾದ ತೆಂಗಿನ ತವರೂರು, ರಾಮಪುರ ಅಲ್ಲಿಯ ಶಾಂತಿಯ ನೆಲೆಯನ್ನು ಶೋಧಿಸುವುದು ಸಾಧ್ಯವೇ ? ಆಕೆ ಗಂಡನ ಮನೆಯಲ್ಲಿ ಕಂಡುದು ಕುಬೇರನ ಹಣದ ರಾಸಿಯನ್ನಲ್ಲ– ನೈತಿಕ ಸಾಮ್ರಾಜ್ಯದಲ್ಲಿಯ ಶಾಂತಿಯ ದೂತರನ್ನು ! ಜೀವನದ ಕಹಿ ಸಿಹಿ ಗಳನ್ನು ಅನುಭವಿಸಿದ ಲೋಕಜ್ಞರನ್ನು ! ಸುಕುಮಾರನ ತಂದೆ ತಾಯಿ ಅದೆಷ್ಟು ಬಡವರು ! ಆದರೆ ಅವರ ಮುಖಗಳಲ್ಲಿ ಹೊಳೆಯುವ ಕಳೆ, ಅವರು ಮನದಲ್ಲಿ ಪಡೆದ ತೃಪ್ತಿ, ಕಷ್ಟ ಪರಂಪರೆಗಳ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವಾಗ, ಮೇರೆವರಿಯದ ಅವರತಾಳ್ಮೆ ! ನಿಜವಾದ ಮಾನವತೆಯನ್ನು ಕೃಷಿಮಾಡಿಕೊಂಡವನು ಇಂತಹ ಸದ್ಗುಣಗಳಿಗೆ ಬೆಲೆಕೊಡುವನೇವಿನಾ ಆಗರ್ಭ ಸಂಪತ್ತಿಗಲ್ಲ ಸುಮೆ ಇವನ್ನೆಲ್ಲ ಸೂಕ್ಷ್ಮವಾಗಿ ಗ್ರಹಿಸಿದಳು ಆಕೆಗೂ ತನ್ನ ಭಾಗ್ಯವು ಒಳ್ಳೆಯ ಗಂಡನನ್ನು ಪಡೆದುದರಲ್ಲಿ ಮಾತ್ರ ವರ್ಧಿಸಬಹುದೆಂದು ಹೊಳೆಯದಿರಲಿಲ್ಲ ತೃಪ್ತಿಯೇ ಪರಮಸುಖವೆಂದು ಆಕೆಗೆ ಗೊತ್ತು ವೈಂದೆ- ಯಂತಹ ಮಾರ್ಗದರ್ಶಿನಿ ದೊರಕಿದಾಗಂತೂ ಸುಮೆಯು ಅಗಾಧ ತೃಪ್ತಿಯನ್ನು ಹೊಂದಿದಳು

*   *   *   *

ಸುಕುಮಾರ ಮುಂದೆ ಬಿ ಎ ವರೆಗೆ ಓದಿ ಬಿ ಈ ಕೂಡಾ ಉತ್ತೀರ್ಣ ನಾಗಿ, ಆಕಾಶವಾಣಿಯ ಕೇಂದ್ರಕ್ಕೆ ಡೈರೆಕ್ಟರನಾಗಿ ನೇಮಿಸಲ್ಪಟ್ಟನು ಸುಮ ತನ್ನ ಮತ್ತು ತನ್ನ ಗಂಡನ ಸುಖ ಮೀರಿ ಸ್ವರ್ಗಸುಖವಿಲ್ಲವೆಂದು ಬಗೆದಳು ನಿಜಕ್ಕೂ ಹೌದು ! ನಮಗೇ ಸುಖವಿಲ್ಲದಿದ್ದರೆ ಇತರರ ಸುಖದ ಅರಿವು ನಮಗೆ ಹೇಗುಂಟಾದೀತು ? ಸುಕುಮಾರನ ಭಾಗ್ಯವರ್ಧನೆಗೆ ಕಾರಣರಾರು ? ಸುಮ ಅವಳ ಸೌಭಾಗ್ಯಕಾರಣನಾದವನು ಸುಕುಮಾರ

*   *   *   *

ಒಂದು ದಿನ, ಆ ಊರಿನಲ್ಲಿ ಓದುತ್ತಿರುವ ಕೆಲ ಬಡವರು ವಿದ್ಯಾರ್ಥಿಗಳು ಸುಕುಮಾರನ ಮನೆಗೆ ಬಂದರು 'ಭವತಿ ಭಿಕ್ಷಾಂ ದೇಹಿ' ಎಂದು ಹೊರಗಿನಿಂದ ಕೂಗಿದರು ಸುಮೆಗೆ ರೇಗಿಹೋಯಿತು 'ದಿನವೂ ನಿಮಗೆ ಅನ್ನ ನೀಡು ತ್ತೇವೆ ಎಂದು ನಾವೇನೂ ಹರಕೆ ಹೊರಲಿಲ್ಲ ನಡೆಯಿರಿ ಇನ್ನೊಂದು ಮನೆಗೆ ' ಎಂದಳು ಒಳಗೆ ಊಟ ಮಾಡುತ್ತಲಿದ್ದ ಸುಕುಮಾರನು, 'ಸುಮ, ಎಂತಹ ಅವಿವೇಕಿಯೋ ನೀನು ? ಬಡ ವಿದ್ಯಾರ್ಥಿಗಳು ಹಸಿವಿನಿಂದ ಕಂಗೆಟ್ಟು ಮಧ್ಯಾ-ಹ್ನದ ವೇಳೆಯಲ್ಲಿ– ಅನ್ನ ನೀಡಿ ತಾಯಿ– ಎಂದರೆ ನಿನ್ನ ಹೃದಯ ಕಲ್ಲಾಗಿ ಹೋಯಿತೇ ? ಚಿಕ್ಕಂದಿನಲ್ಲಿ ನಿನ್ನ ತಾಯಿಯು, ನಾನು ಇದೇ ರೀತಿಯಲ್ಲಿ ನಿಮ್ಮ ಮನೆಗೆ ಬಂದಾಗ ಅದೆಷ್ಟು ಮಾತೃಹೃದಯ ಪ್ರೇರಿತಳಾಗಿ ನನ್ನ ಮೇಲೆ ದಯೆಯ ಮಳೆಯನ್ನೇ ಕರೆದು ಬಿಟ್ಟಳೆಂಬುದು ನಿನಗೇ ತಿಳಿದಿದೆ ಕರೆ ಆ ಹುಡುಗರನ್ನು ! ಅವರಿಗೊಂದಿಷ್ಟು ಅನ್ನ ನೀಡಿದರೆ ನಮಗೇನೂ ಬಡತನ ಬರಲಾರದು ' ಎಂದನು ಸುಮೆಗೆ ತಾನು ಗೈದ ಅವಿವೇಕದ ಕೆಲಸಕ್ಕಾಗಿ ಪಶ್ಚಾತ್ತಾಪವುಂಟಾಯಿತು ಆ ಕ್ಷಣವೇ ನೆರೆಮನೆಗೆ ಹೋಗಿದ್ದ ಆ ಹುಡುಗ ರನ್ನು ಕರೆದು, ಹೊರಗೆ ಕುಳ್ಳಿರಲು ಹೇಳಿ, ಪುನಃ ಅಡಿಗೆ ಮಾಡಿ ಅವರೆಲ್ಲರಿಗೂ ಬಡಿಸಿದಳು

ಯಾರ ಬಾಯಿಂದ ಕೇಳಿದರೂ ಅವಳ ಗಂಡನ ಗುಣಕಥನ ಬಡತನ ದಲ್ಲಿ ಹುಟ್ಟಿದ ಕೆಲಕೆಲವರು ಎಷ್ಟು ಒಳ್ಳೆಯವರಿರುತ್ತಾರೆ ! ಸುಕುಮಾರನ ಮನೆಯ ಪಕ್ಕದ ಮನೆಯವರೆಲ್ಲ ತಮ್ಮ ತಮ್ಮ ಹೆಂಡಂದಿರಿಗೆ– ' ನೋಡು, ಆ ಸುಕುಮಾರನ ಹೆಂಡತಿ ಎಷ್ಟು ಒಳ್ಳೆಯವಳು ! ಅವಳ ಮಾತೆಷ್ಟು ನಯ

ಮತ್ತು ತೂಕವುಳ್ಳದ್ದು ! ಅವಳ ನಡತೆಯೆಷ್ಟು ಪವಿತ್ರ ! ಗುಣವೆಷ್ಟು ಆದರ್ಶ !'' ಎಂದು ಸುನೊಯು ಉದಾಹರಣೆಯನ್ನು ಕೊಡುತ್ತಿದ್ದರು

*　　　*　　　*　　　*

'ಏನ್ರೀ, ನಿಮ್ಮ ಅಕ್ಕ ರಚಿಸಿದ ವೃಂದಾವನವನ್ನು ನನಗೆ ಇನ್ನೊಮ್ಮೆ ನೋಡಬೇಕೆಂದು ಮನಸ್ಸಾಗುತ್ತಿದೆ ವೃಂದಾವನ ರಚನೆಯಲ್ಲಿ ನಿನ್ನ ಅಕ್ಕನ ಹೆಸರನ್ನು ಬಾರಿಬಾರಿಗೊಮ್ಮೆ ಸ್ಮರಣೆ ಮಾಡಬೇಕು ವೃಂದಾ ಸಾಧಾರಣ ಹೆಂಗಸಲ್ಲ ಅವಳು ಅಸಾಧಾರಣ ಮಾನವಿ ಆಕೆಯ ತೇಜಸ್ಸಿಗೆ ನನಗೆ ನಿಲ್ಲಲೂ ಭಯವಾಗುತ್ತಿದೆ ಅವಳು ಯೋಗಿನಿ ಆತ್ಮಬಲದ ತೇಜಸ್ಸು ಆಕೆಯ ಮುಖದ ಮೇಲೆ ದೇದೀಪ್ಯಮಾನವಾಗಿ ಮಿಂಚುತಿದೆ ರಾಮಪುರಕ್ಕೆ ಯಾವಾಗ ಹೋಗೋಣ ?'' ಎಂದು ಸುಮೆ ಗಂಡನನ್ನು ಕೇಳಿದಳು

'ಅದೇಕೆ— ಅವಳು ರಚಿಸಿದ ವೃಂದಾವನವನ್ನು ನೋಡುವ ಕುತೂಹಲ ವುಂಟಾಯಿತು ನಿನ್ನಲ್ಲಿ ?'

'ಮನೆಯೆಂದಮೇಲೆ ಒಂದು ವೃಂದಾವನವಿರಲೇಬೇಕಲ್ಲವೇ ? ಅದರ ರಚನಾಕ್ರಮವನ್ನು ನಿಮ್ಮ ಅಕ್ಕನಿಂದ ತಿಳಿಯೋಣವೆಂದು ಅವಳ ವಿಚಾರವನ್ನೆತ್ತಿದೆ'

'ಅದೆಲ್ಲ ನಿನ್ನ ವಿಚಾರ ಲಹರಿಯ ಫಲ ! ಅಂತೂ ನೀನು ಹೇಳಿದಂತೆ ನನ್ನ ಅಕ್ಕ ವೃಂದಾವನವನ್ನು ಅತ್ಯುತ್ತಮವಾಗಿ ರಚಿಸುವುದೇನೊ ನಿಜ ಇನ್ನಾವಾಗಲಾದರೂ ಅಗತ್ಯವಾಗಿ ಹೋಗೋಣ ಅದಿರಲಿ, ಸುಮೆ—ನನ್ನ ನಿನ್ನ ಸಂಬಂಧ ಕೂಡಿಬಂದಿರುವಲ್ಲಿ ಇನ್ನೊಂದು ವಿಶೇಷವೇನೆಂದು ನಿನಗ ಗೊತ್ತೇ ?

'ಅದೇನು ಇನ್ನೊಂದು ವಿಶೇಷ ?' ಆಶ್ಚರ್ಯದಿಂದ ಸುಮ ಪ್ರಶ್ನಿಸಿದಳು

'ಹಾಗಾದರೆ ಈ ದಿನ ಸಾಯಂಕಾಲ ಅದು ನಿನಗೆ ತಿಳಿಯುವುದು' ಎಂದು ಸುಮ್ಮನಾದನು

*　　　*　　　*　　　*

ಸಾಯಂಕಾಲ ಹೂವಿನಪೇಟೆಯಿಂದ ಮರಳಿ ಮನೆಗೆ ಬರುತ್ತಾ ಕೈಯಲ್ಲಿ ಎಳೆಯ ಕೋಮಲವಾದೊಂದು ಹೂವುಗಳ ಕುಚ್ಚನ್ನು ಹಿಡಿದುಕೊಂಡು ಮನೆಗೆ ಬಂದನು ಇಪ್ಪತ್ತು—ಇಪ್ಪತ್ತೊಂದು ವರ್ಷದ ಕಿಶೋರಿಯಾದ ಸುಮೆ ! ಅವಳೇ ಹಿಂದು ಹೋಗಿರುವಾಗ, ಅವಳಿಗೆ ಇತರ ಹೂಗಳೇಕೆ ? ಯಜಮಾನರ ಸವಾರಿ

ಮನೆಗೆ ಬಂದೊಡನೆಯೇ ಸುಮೆಯನ್ನು ಕೋಣೆಗೆ ಕರೆದರು ಅವಳ ಜಡೆಗೆ ಹೂ ದಂಡೆಯನ್ನು ಮುಡಿಸಿ ಆಕೆಗೆ ತುಟಿಗಳ ಪರಸ್ಪರ ಸಂದೇಶವನ್ನು ಬೀರಿದರು ಚುಂಬನವು ಪ್ರಣಯಿಗಳ ಮೂಕಭಾಷೆಯಲ್ಲವೇ ?

'ನನ್ನ ಹೆಸರು ಸುಕುಮಾರ, ನಿನ್ನ ಹೆಸರು ಸುಮ ಇವೆರಡು ಪದಗಳನ್ನು ಕೂಡಿಸಿ ಒಟ್ಟಿಗೆ ಉಚ್ಚರಿಸಿದರೇನರ್ಥ, ಹೇಳು ನೋಡೋಣ'

'ಎರಡು ಪದಗಳು ಕೂಡಿದರೆ ಗಂಡ ಹೆಂಡತಿ'

'ಹುಚ್ಚಿ, ಗಂಡ ಹೆಂಡತಿಯೇನೊ ಹೌದು ಪದದ ಅರ್ಥಹೇಳು'

ಸುಮೆ ಕಣ್ಣು ಕಣ್ಣು ಬಿಟ್ಟಳು

ಸುಕುಮಾರ ಎಂದರೆ ಎಳೆಯ ಸುಮವೆಂದರೆ ಹೂವು, ಎಳೆಯಹೂವು ಎಂದರ್ಥ ನೀನು ಹೂವಾದುದರಿಂದ ಈ ದಿನ ನಿನಗೆ ಹೂವಿನಪೂಜೆ ಮಾಡಿದ್ದೇನೆ' ಎಂದನು

'ನಾನು ಹೂವಾಗಿರುವುದರಿಂದಲೇ ನಿಮ್ಮಿಂದ ಕಷ್ಟಪಡುವುದು ತಪ್ಪಿದ್ದಲ್ಲ ಹೂವನ್ನು ಮಾತ್ರ ಬಾಡಲಿಕ್ಕೆ ಬಿಡಬೇಡಿ ನೀವು ಈ ರೀತಿ ಹಗಲು ರಾತ್ರಿಯೆನ್ನದೆ ಚುಂಬಿಸಿದರೆ ಹೂ ಬಾಡದೆ ಇರುತ್ತದೆಯೇ ?'

'ನನ್ನ ಕೆಲಸವನ್ನು ನಾನು ಮಾಡದೆ ಇದ್ದರೆ ನನ್ನ ಹೆಸರೇನು ಸಾರ್ಥಕವಾದಂತಾಯಿತು ಸುಮ ? ನೀನು ಕೋಮಲವಾದ ಒಂದು ಹೂವಾಗಿ ಅರಳಲಿಕ್ಕೆ ನನ್ನ ಎಳೆಯತನವೊಂದು ಬೇಕಲ್ಲ ಅಂತೂ ಅಂದು ಬಾಗಿಲಮರೆಯಲ್ಲೇ ನನ್ನನ್ನು ನೋಡುತಿದ್ದು, ನಿನ್ನ ತಾಯಿ—'ಸುಕುಮಾರನಿಗೆ ಕಾಫಿ ತೆಗೆದುಕೊಂಡು ಹೋಗಿಕೊಡು' ಎಂದರೆ ನಾಚಿಕೆಯಿಂದ ಕಾಫಿಲೋಟವನ್ನು ಎದುರಿಗಿಟ್ಟು ಓಡಿ ಹೋಗುತಿದ್ದೆ ನೀನು ಈಗ ನೊಡು— ಎಂತಹ ಗಂಡುಬೀರಿಯಾಗಿಬಿಟ್ಟೆ !'

'ಎಲ್ಲವೂ ನಿಮ್ಮದಯೆ ಆದರೆ ಗಂಡುಬೀರಿಯೆಂದು ಮಾತ್ರ ನನ್ನಲ್ಲಿ ಆರೋಪಿಸಬೇಡಿರಿ' ಎಂದಳು ಸುಮ.

* * * *

ಆ ಎಳೆಯ ಹೂ—ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆಯುವ ಸುಕುಮಾರನ ಮನೆಯಲ್ಲಿ ಶೋಭಿಸಿತು ಸುಕುಮಾರ—ಸುಮ ! ಎಷ್ಟು ಮಧುರವಾದ ಹೆಸರು ಕೇಳಲಿಕ್ಕೆ, ಅಲ್ಲವೇ ?

# ಹೊಣೆ ಯಾರಿಗಾಗಿ ?

ಸ್ವತಂತ್ರ ಭಾರತದಲ್ಲಿಯ ಮಹಿಳೆಯರ ಕರ್ತವ್ಯ ಮತ್ತು ಹಕ್ಕು ಹೊಣೆಗಳಾವುವು ? — ಎಂಬ ವಿಷಯದ ಮೇಲೆ ವನಿತಾ ಸೇವಾ ಸಮಾಜಕ್ಕೆ ಸೇರಿದ ಸದಸ್ಯೆಯರು ಚರ್ಚಾಕೂಟವನ್ನೇರ್ಪಡಿಸಿದ್ದರು ಪ್ರತಿಷ್ಠಿತ ಮನೆತನಕ್ಕೆ ಸೇರಿದ ಮಹಿಳೆಯೊಬ್ಬಳು ಅಧ್ಯಕ್ಷಿಣಿ ನೂರಾರು ಮಹಿಳೆಯರು ನೆರೆದಿದ್ದರು ಅಂದಿನ ಸಭೆಯಲ್ಲಿ ಅನೇಕ ವಿಷಯಗಳು ಚರ್ಚಿಸಲಿಕ್ಕಿದ್ದವು ಮಹಿಳೆಯರ ಸ್ಥಾನಮಾನವೇನು ? ಅವರಿಗೆ ವಿವಾಹ ವಿಚ್ಛೇದನದ ಹಕ್ಕಿರಬೇಕೇ ? ಅದು ಅನಿವಾರ್ಯವೇ ? ಪಿತ್ರಾರ್ಜಿತಸೊತ್ತಿಗೆ ಮಹಿಳೆಯು ಅಧಿಕಾರಿಣಿಯೇ ?
ಇವೇ ಮುಂತಾದ ವಿಷಯಗಳು ಚರ್ಚೆಗೆ ಕಾದಿದ್ದವು ಒಂದು ವಿಶೇಷವೇನೆಂದರೆ— ಆ ದಿನದ ಸಭೆಗೆ ಪ್ರತಿಷ್ಠಿತ ಗಂಡಸರೂ ಅಹ್ವಾನಿತರಾಗಿದ್ದರು ಅನೇಕ ಮಹಿಳೆಯರು ಸಭೆಯಲ್ಲಿ ಭಾಷಣಮಾಡಿದರು ಬಣ್ಣ ಬಣ್ಣದ ದೀಪಗಳಂತೆ, ಮಣಿಗಳಂತೆ, ಅಂದಿನ ಸಭೆಗೆ ಮೆರಗುಕೊಟ್ಟರು ಮೊದಲೇ ನಿರ್ಧರಿಸಿದ ಮೇರೆಗೆ ಸಭೆ ಬೇಗನೆ ಮುಕ್ತಾಯವಾಗಬೇಕಿತ್ತು ಮಹಿಳೆಯರ ಹಕ್ಕುಹೊಣೆಗಳನ್ನು ಚರ್ಚಿಸಲು ಬಂದ ಎಷ್ಟೋ ಹೆಂಗಸರಲ್ಲಿ– ಕೆಲವರು ಗಂಡಂದಿರ ದಾಕ್ಷಿಣ್ಯಕ್ಕಾಗಿ, ಕೆಲವರು ಹೆದರಿಕೆಗಾಗಿ, ಇನ್ನು ಕೆಲವರು ವಿಹಾರಕ್ಕಾಗಿ, ಮತ್ತೆ ಕೆಲವರು ವಿಲಾಸಕ್ಕಾಗಿ ಬಂದವರೇ ಹೆಚ್ಚು ಮಂದಿ ಕೆಲವರು ತಮ್ಮ ತಮ್ಮ ಮಕ್ಕಳು ಮರಿಗಳನ್ನು ಬೆನ್ನಿಗೆ ಕಟ್ಟಿಕೊಂಡೇ ಬಂದಿದ್ದರು ವನಿತಾ ಸೇವಾ ಸಮಾಜದಲ್ಲಿ ಮೊದಲು ಸಭೆ ಜರುಗುತಿದ್ದಾಗ, ಗಂಡಸರಿಗೆ ಪ್ರವೇಶವಿರಲಿಲ್ಲ ಜನವರಿ ೨೬ ನೇ ದಿನಾಂಕದ ನಂತರ ಪ್ರಜಾರಾಜ್ಯದಲ್ಲಿ ಗಂಡಸರು–ಹೆಂಗಸರು ಒಂದೇ ಎಂಬ ಉದಾರನೀತಿಯನ್ನು ಸಮರ್ಥಿಸಿಯೋ ಏನೋ– ಅವರ ಮೇಲಿನ ಸಹಾನುಭೂತಿಯಿಂದ ಆ ದಿನದ ಮಟ್ಟಿಗೆ ಅವರನ್ನೂ ಆಹ್ವಾನಿಸಿದ್ದರು ಇನ್ನು ಮೇಲೆ ಈ ರೀತಿ ಮಧುರಮಿಲನಕ್ಕೆ ಎಡೆಯಿಲ್ಲವೆಂದು ಗಂಡಸರು ಮೊದಲೇ ಊಹಿಸಲೆಂದೋ ಏನೋ ! ಪ್ರಜಾರಾಜ್ಯದಲ್ಲಿದ್ದ ಮಹಿಳೆಯರಿಗೆ ಈಗ ತುಂಬಾ ಹೊಣೆಹೊರಬೇಕಾಗಿದೆಯೆಂದು ಕೆಲವರು ಸುಶಿಕ್ಷಿತ ಹೆಂಗಸರು ತಿಳಿದುಕೊಂಡಂತಿದೆ ಅವರ ಹೊಣೆಯೇನು ಸಾಮಾನ್ಯವೇ ? ಇಡೀ ಪ್ರಪಂಚವೇ ಅವರಿಂದ ಆಳಲ್ಪಡುತ್ತಿದೆಯೆಂದು ಅವರು ಭಾವಿಸಿರಬಹುದು ನಮ್ಮ ಗಂಡಸುಜಾತಿ

ಯನ್ನೇ ಆಳುವುದಲ್ಲದ ಇಡೀ ಪ್ರಪಂಚವನ್ನೇ ಆಳಬೇಕೆಂಬ ಆಸೆ ಹೆಂಗಸರಿಗೆ ಉಂಟಾಗಿವೆಯೆಂದು ತೋರುತ್ತದೆ ಹೆಂಗಸರಿಗೆ ಸ್ವಾತಂತ್ರ್ಯ, ಮಂಗನ ಕೈಗೆ ದೀಪ ಎರಡೂ ಎಂತಹ ಅನಾಹುತವನ್ನುಂಟು ಮಾಡುತ್ತದೆಂದು ಗಂಡಸರಾದ ನಾವು ಅರಿಯೆವೇ? ಹೆಂಗಸರಿಗೆ ವಿಶೇಷ ಪ್ರಯಾಸದ ಕೆಲಸ, ಆಯಾಸದ ತಿರುಗಾಟ ಇವೆರಡೂ ಸಲ್ಲವು ಹೀಗಿರುವಾಗ ಸರ್ಕಾರವು ಕಾಯಿದೆ ಕಾನೂನು ರಚಿಸುತ್ತದೆಂದು ಕೇಳುವ, ಅದನ್ನು ಅನುಮೋದಿಸುವ ಹೆಂಗಸರಿಗೇಕೆ ಬುದ್ಧಿ ಇಲ್ಲ? ಅಂತೂ ಅಂದಿನಸಭೆಗೆ ಎಂದಿಲ್ಲದ ಕಳೆಬಂದಿತ್ತು ಗಂಡಸರೂ ಅಂದಿನಸಭೆಗೆ ಬರುತ್ತಾರೆಂದು ಪೂರ್ವಭಾವಿಯಾಗಿಯೇ ತಿಳಿದ ಚದುರೆಯರು ತಮ್ಮ ಮುಖಕಮಲಗಳನ್ನು 'ಪೌಡರ್'ನಲ್ಲಿಯೇ ಮುಳುಗಿಸಿಬಿಟ್ಟಿದ್ದರು ಅವರ ಮುಖ ನೋಡಿದರೆ ಹಿಟ್ಟಿನ ಮುದ್ದೆಯ ನೆನಪನ್ನು ತರುತ್ತಿತ್ತು ಕೈಗೆ ವಾಚ್ ಕಣ್ಣಿಗೆ ಕನ್ನಡಕ, ಹೊಸ ಹೊಸ ತರದ ಉಡುಗೆ ತೊಡುಗೆಗಳು, ಯಾವ ಹೆಂಗಸಿನ ಹಣೆಯಲ್ಲಿಯೂ ಕುಂಕುಮ ಕಂಡೇಬರಲಿಲ್ಲ ಬಳೆ ಅಪರೂಪ, ಸೀರೆ ವರ್ಜ್ಯ, ಕುಪ್ಪಸನಾಸ್ತಿ, ಹೀಗೆಂದರೆ ಇಲ್ಲವೇ ಇಲ್ಲವೆಂದಲ್ಲ– ವಸಂತಕಾಲದ ಹಣ್ಣೆಲೆಗಳಂತೆ, ಅಷ್ಟೇ! ಹಕ್ಕು ಹೊಣೆಗಳನ್ನು ಚರ್ಚಿಸುವ ನೆಪದಲ್ಲಿಯೇ ಗಂಡಸರಲ್ಲನೇಕರನ್ನು ಹೆಂಗಸರು ಬುಟ್ಟಿಯಲ್ಲಿ ಹಾಕಿಬಿಟ್ಟರು– ಓರೆನೋಟದ ಪ್ರಭಾವದಿಂದ! ಈ ಹೆಂಗಸರ ಸಭೆಯಲ್ಲಿ ಒಂದು ಅಶುಭಲಕ್ಷಣವೇನೆಂದರೆ– ಯಾವಳಾದರೊಬ್ಬಳು ಮಹಿಳೆಯು ಭಾಷಣಮಾಡುವಾಗ, ಮಕ್ಕಳ ಕಿರಚಲು ದನಿ ತೊಂದರೆ ಕೊಡುತಿತ್ತು ಒಬ್ಬೊಬ್ಬರ ಬೆನ್ನಹಿಂದೆ ಮೂರು ನಾಲ್ಕು ಮಕ್ಕಳು! ಈ ಅನಿಷ್ಟತೊಲಗಲೆಂದರೆ ಅತ್ತ ಹೆಂಗಸರ ನಗೆಯಹೊಗೆ! ನಮ್ಮ ಗಂಡಸರ ಅದೃಷ್ಟಕ್ಕೆ– ಆ ದಿನದ ಭಾಷಣದಲ್ಲಿ 'ಪ್ರತಿಯೊಬ್ಬ ತರುಣಿಯೂ ಮದುವೆಯಾಗಲೇಬೇಕು ಗೃಹಿಣಿಯಾಗಿ ಸಂಸಾರವನ್ನು ನಿರ್ವಹಿಸುವುದು ತಾಯಿಯಾಗುವುದು– ನಮ್ಮ ಹಿಂದೂ ಧರ್ಮದ ತಿರುಳು– ಎಂದು ರರಾವು ಆಯಿತು ನಾವು ಇದರಿಂದ ಬದುಕಿದೆವೆನ್ನಿ!

ಆದರೆ ಇನ್ನೂ ಮೂಲ ಪ್ರಶ್ನೆಯೊಂದಿದೆಯಲ್ಲ–! ಹೊಣೆಯಾರಿಗಾಗಿ? ಇದನ್ನು ರಾಜಕೀಯವಾಗಿ ಚರ್ಚಿಸುವುದಕ್ಕಿಂತ ಸಾಮಾಜಿಕವಾಗಿ ಚರ್ಚಿಸುವುದೇ ಮೇಲು 'ಹೊಣೆ ಯಾರಿಗಾಗಿ?' ಎಂಬುದರ ಹಿನ್ನೆಲೆಯಲ್ಲಿ ಒಂದು ಕತೆಯು ನಡೆದುದನ್ನು ನೆನಪುಮಾಡಿಕೊಂಡರೆ– ಜನ್ಮ ಜನ್ಮಕ್ಕೂ ಹೆಂಗಸರು ಸ್ವತಂತ್ರರಲ್ಲ, ಅವರು ಪರಾಧೀನ, ಅವರಿಗೆ ಈಗ 'ಹಿಂದೂ ಕೋಡ್‌ಬಿಲ್'

ವಾಸಾವರೆ, ಕವಡೆಯಷ್ಟು ಬೆಲೆಯೂ ಇರಲಾರದು, ಸ್ತ್ರೀತ್ವವೇ ಅಂಗಡಿಯಲ್ಲಿ ವಿಕ್ರಯವಾಗಿ ಹೋಗುವುದೆಂದು ಹೇಳಬಹುದಾಗಿದೆ

*   *   *   *

ಕತೆಯ ಹಿನ್ನೆಲೆಯಲ್ಲಿ ತುಂಬಾ ಮರುಕವಿದೆ

ರಾಧಾಕೃಷ್ಣರಾಯರಿಗೆ ಗೋದೂ ಎಂಬವಳು ಹೆಂಡತಿ, ವಸಂತಲಕ್ಷ್ಮಿಯೊಬ್ಬಳೇ ಮಗಳು ಅವರು ಆಗರ್ಭ ಶ್ರೀಮಂತರಿದ್ದುದರಿಂದ, ಮಗಳನ್ನು ತುಂಬಾ ಮಮತೆಯಿಂದ ಸಾಕಿದ್ದರು ಅವಳತಾಳಕ್ಕೆ ಸರಿಯಾಗಿ ಕುಣಿದರು ನೆರೆಮನೆಯ ಶಿವಶಂಕರನಿಗೂ ವಸಂತಲಕ್ಷ್ಮಿಗೂ ತುಂಬಾ ಸ್ನೇಹ, ಸಲಿಗೆ, ವಿಶ್ವಾಸ, ಆತ ಕೇವಲ ಬಡವ, ಈಕೆ ಧನಲಕ್ಷ್ಮಿ ಆದರೆ ಪ್ರೇಮ ಪಾಶ ಇವರಿಬ್ಬರನ್ನೂ ಬಲವಾಗಿ ಬಿಗಿದುಬಿಟ್ಟಿತ್ತು ಈ ವಿಚಾರ ರಾಧಾಕೃಷ್ಣ ರಾಯರಿಗೆ ಅಗವ್ಯ, ತನ್ನ ಅಂತಸ್ತಿಗೆ ಸರಿಯಾದ ಮಗಳ ಅಂದಚೆಂದಕ್ಕೆ ಅನು ಗುಣವಾದ, ಯೋಗ್ಯವರನ ಶೋಧನೆಯಲ್ಲಿದ್ದವರು ವರನನ್ನು ಗೊತ್ತುಮಾಡಿ ಲಗ್ನ ನಿಶ್ಚಯಿಸುವುದೂ ತಡವಿರಲಿಲ್ಲ ಈ ವಿಷಯವನ್ನು ಗೋದೂಬಾಯಿ ಮಗಳಿಗೆ ತಿಳಿಸಿದಳು ಮಗಳ ಮುಖಬಾಡಿತು ತಾಯಿಯು ಕಾರಣವನ್ನು ಕೇಳಲಾಗಿ, ನಾನು ಶಿವಶಂಕರನನ್ನೇ ಮದುವೆಯಾಗುವವಳು ಅವನ ಹೊರತು ಇನ್ನಾರನ್ನೂ ಮದುವೆಯಾಗಲಾರೆ'ನೆಂದುತ್ತರಿಸಿದಳು ಶಿವಶಂಕರನನ್ನು ಮದುವೆಯಾದರೆ ಗಂಡಹೆಂಡತಿ— ಇಬ್ಬರೂ ತಿರುವೆಗೆ ಹೋಗಬೇಕು ಇಲ್ಲವೇ ಮಾವನಮನೆಯೇ ಅವನಿಗೆ ಗತಿ ಹುಚ್ಚೀ, ಸುಮ್ಮನೆ ಹಠಬೇಡ, ಆ ಕುಚೇಲನನ್ನು ಮದುವೆಯಾಗುತ್ತೇನೆನ್ನುವ ನೀನು ಮದುವೆಯೆಂದರೆ ಗೊಂಬೆ ಯಾಟವೆಂದು ತಿಳಿದಿದ್ದಿಯಾ ? ' ಎಂದು ತಾಯಿ ಗದರಿಸಿದಳು ಆ ಮಾತನ್ನು ಕೇಳಿದ ವಸಂತಲಕ್ಷ್ಮಿ ತನ್ನ ದೃಢನಿರ್ಧಾರವನ್ನೆಂದಿಗೂ ಬದಲಾಯಿಸಲಿಲ್ಲ ತಂದೆಯ ಮಾತಿಗೂ ಬೆಲೆ ಕೊಡಲಿಲ್ಲ

*   *   *   *

ಒಂದು ದಿನ ಬೆಳಕು ಹರಿಯುವುದರೊಳಗಾಗಿ ಶಿವಶಂಕರನೂ ವಸಂತ ಲಕ್ಷ್ಮಿಯೂ ಮಾಯವಾಗಿ ಬಿಟ್ಟಿದ್ದರು ರಾಧಾಕೃಷ್ಣರಾಯರು, 'ಹೋಗಲಿ, ಹೋದರೆಲ್ಲಿಗೆ ಹೋಗುತ್ತಾಳೆ ? ಅನ್ನಾನ್ನಗತಿಯುಂಟಾಗಿ ಯಾರಮನೆಯ ಲ್ಲಿಯೋ, ಧರ್ಮಶಾಲೆಯಲ್ಲಿಯೋ ಬಿದ್ದುಸಾಯುತ್ತಾಳೆ ನನಗೆ ಮಕ್ಕಳೇ

ಇಲ್ಲವೆಂದು ಭಾವಿಸುತ್ತೇನೆ, ಎಂದು ಸುಮ್ಮನಿದ್ದುಬಿಟ್ಟರು ಯೌವನದ ಪ್ರಾದುರ್ಭಾವವುಂಟಾಗಲು, ತರುಣರಂತೆ ತರುಣಿಯರೂ ಅವಿವೇಕದ ಹಾದಿಯನ್ನು ತುಳಿಯುತ್ತಾರೆನ್ನುವುದಕ್ಕೆ ಇದೇ ದೃಷ್ಟಾಂತ ಶಿವಶಂಕರನ ಶೃಂಗಾರ ಶಾಸ್ತ್ರದ ವರ್ಣನೆಗಳಿಗೆ, ಪ್ರೇಮದವಾರಗಳಿಗೆ ಮರುಳಾಗಿ ಮನಸೋತ ವಸಂತಲಕ್ಷ್ಮಿ ಭವಿಷ್ಯದ ಚಿಂತನೆಯನ್ನೇ ಮಾಡಲಿಲ್ಲ ಈ ತಾಯಿತಂದೆಯಿಂದೇನಾಗಬೇಕು? ನಮ್ಮ ಸುಖದುಃಖ ಇವರಿಗೆ ಹೇಗೆ ತಿಳಿಯಬೇಕು? ನಮಗೆ ಯೋಗ್ಯರಾದವರನ್ನು ಇವರು ಆರಿಸುತ್ತಾರಂತೆ, ಎಲ್ಲ ಭ್ರಮ! 'ಅರವತ್ತಕ್ಕೆ ಅರಮರಳು ಎಂಬಂತೆ ತಂದೆಗೆ ಬುದ್ಧಿಭ್ರಮೆ, ತಾಯಿಗೆ ಮೂಢಬುದ್ಧಿ, ಕುರುಡು ನಂಬಿಕೆ! ಹೀಗೆಂದು ಮನಸೋ ಇಚ್ಛೆ ತಾಯಿ ತಂದೆಗೆ ಬೈದಳು ವಸಂತಲಕ್ಷ್ಮಿ ಮನಸ್ಸಿನಲ್ಲಿ

ಮುಂದೆ ಇವರಿಬ್ಬರ ದಾಂಪತ್ಯಸುಖ ನೋಡಿ ನಲಿಯಬೇಕು ನೋಡೋಣ ಶಿವಶಂಕರ ಹೆಂಡತಿಯನ್ನು ಹೇಗೆ ಸಾಕುತ್ತಾನೆಂದು! ಕೈಯಲ್ಲಿ ಕಾಸಿಲ್ಲ ಚಾಕರಿ ಸಂಪಾದಿಸಲು ಬೇಕಾದ ವಿದ್ಯೆಯೂ ಇಲ್ಲ ಆದರೆ ಪ್ರಣಯದ ಮೊದಲಿನ ವಾರಗಳಂತಿರುವ ಅವರಿಬ್ಬರೊಳಗಿನ ಇಂದ್ರಿಯಾಸಕ್ತಿ, ವಿಷಯಲಾಲಸೆ, ಕಾಮದಕಾವು ಇಳಿಯದೆ ಏರಿಕೆಯಲ್ಲೇ ಇತ್ತು ಎಲ್ಲೆಲ್ಲೋ ತಂಗಿದ್ದರು, ಹೇಗೋ ಬೇಡಿಯೋ ಕಾಡಿಯೋ ಮನೆಗೆ ಬೇಕಾದ ಅಕ್ಕಿಯೋ, ಬೇಳೆಯೋ, ಎಣ್ಣೆಯೋ ಶಿವಶಂಕರ ತಂದುಹಾಕುತ್ತಿದ್ದನು ಮೂರು ನಾಲ್ಕು ವರ್ಷಗಳು ಈ ಅವಧಿಯಲ್ಲಿ ಮೂರುನಾಲ್ಕು ಯುಗಗಳಾಗಿ ಉರುಳಿದವು ವಸಂತಲಕ್ಷ್ಮಿಯೂ ಎರಡು ಮೂರು ಮಕ್ಕಳ ತಾಯಿಯಾದಳು

*   *   *   *

ಪ್ರಣಯಯಾತ್ರೆ ಮುಗಿಯಿತು ಪ್ರೇಮದಕಾವು ಇಳಿಯಿತು ವಾತ್ಸಲ್ಯದ ಸರೋವರ ಬತ್ತಿತು ಬದಲಿಗೆ ಜಿಗುಪ್ಸೆ ಚಿಗುರಿ, ಉದಾಸೀನತೆ ಬೆಳೆದು ಗಿಡವಾಯಿತು ಅದರಿಂದ ಫಲ—ವಿರಸ! ತಂದೆತಾಯಿಯ ಅಧೀನದಲ್ಲಿದ್ದು ಸುಖಸೌಭಾಗ್ಯದ ಹೊನಲಿನಲ್ಲಿ ಅಡಿಯಿಂದ ಮುಡಿಯವರೆಗೆ ಮಿಂದದ್ದರ ನೆನವು ಆಗ ಅವಳಲ್ಲುಂಟಾಯಿತು ಈಗಿನ ಭಾಗ್ಯ ? ತಿರುಕರ ಜೀವನ! ಒಂದುಹೊತ್ತಿಗೆ ಊಟವಿದ್ದರೆ ಇನ್ನೊಂದು ಹೊತ್ತಿಗೆ ಉಪವಾಸ ಶಿವಶಂಕರನು ಈಕೆಯ ಮಾಂಸದ ಮುದ್ದೆಯಲ್ಲಿಮಾತ್ರ ಸೌಂದರ್ಯವನ್ನು

ಕಂಡನು ಇವಳೂ ಅವನ ಪೈಹಿಕ ಸೌಂದರ್ಯಕ್ಕೆ ಮನಸೋತಳು ಹೀಗೆ ಸೌಂದರ್ಯಾರಾಧನೆ, ಮಾಂಸಾರಾಧನೆ ಪರಸ್ಪರರಲ್ಲಿ ನಡೆಯಿತು ಮುಂದಿನ ಪರಿಣಾಮವನ್ನೇ ಯೋಚಿಸದೆ, ಊರಿನಿಂದ ಹೇಳದೆ ಕೇಳದೆ ಓಡಿ ಬಂದ ಪ್ರಣಯಿಗಳಿವರು ! ಶಿವಶಂಕರನಿಗಂತೂ ದಿನವೂ ಅವರ ಮನೆ, ಇವರ ಮನೆಯೆಂದು ಸ್ವಲ್ಪವೂ ಆತ್ಮಾಭಿಮಾನ, ಗೌರವವಿಲ್ಲದೆ-ಸ್ವಲ್ಪ ಅಕ್ಕಿಕೊಡಿ, ಬೇಳೆ ಕೊಡಿ, ಎಣ್ಣೆಕೊಡಿ, ಮಜ್ಜಿಗೆ ಕೊಡಿ, ಹಾಲುಕೊಡಿ- ಎಂದು ಕೇಳಿ ಕೇಳಿ ಬೇಸರ ಹುಟ್ಟಿತು ನಾಲದುದಕ್ಕೆ ನಾಲ್ಕು ಮಕ್ಕಳು ಬೇರೆ ಹೊಟ್ಟೆಗೇ ಇಲ್ಲದಾಗ ಆ ಮಕ್ಕಳ ಪೋಷಣೆಯೆಂತು ? ತಂದೆಯಮನೆಯಿಂದ ತಂದ ಸೀರೆ ಕುಪ್ಪಸಗಳನ್ನು ಬಿಟ್ಟರೆ, ಈಗ ಮೂರುನಾಲ್ಕು ವರ್ಷಗಳಿಂದ ಆಕೆ ಸೀರೆಯನ್ನೇ ಕೊಂಡುಕೊಂಡವಳಲ್ಲ ದುಡುಕಿ ಶಿವಶಂಕರನನ್ನು ಪ್ರೇಮಿಸಿದ್ದಕ್ಕೆ, ವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಸಡ್ಡುಹೊಡೆದು ನಿಂತಿದ್ದಕ್ಕೆ ಅವಳೀಗ ಅನುಭವಿಸುತ್ತಾಳೆ – ಪ್ರಾರಬ್ಧ ಕರ್ಮವನ್ನು ! ಶನಿ ಅವಳ ಬೆನ್ನುಹತ್ತಿದ್ದಾನೆ – ಏನು ಮಾಡುತ್ತಾಳೆ, ಪಾಪ ! ಹೆಣ್ಣು ಹೆಂಗಸು ! ಎಲ್ಲಾ ಹೆಂಗಸರೂ ಒಂದು ಸಲ ಸ್ವಾತಂತ್ರ್ಯದ ಸುಳಿಯಲ್ಲಿ ಸಿಲುಕಲಿ- ಆಗ ಗೊತ್ತಾಗುತ್ತದೆ ವಸಂತ ಲಕ್ಷ್ಮಿಯ ಶೋಚನೀಯಾವಸ್ಥೆ !

*  *  *  *

ಶಿವಶಂಕರನು ವಸಂತ ಲಕ್ಷ್ಮಿಯು ಇನ್ನೂ ತಾರುಣ್ಯದಲ್ಲಿದ್ದಾಗ – ಕೋಮಲವಾದ ಹೂವಾಗಿ ವಿಕಸಿಸಿದಾಗ – ಆಕೆಯನ್ನು ಅಷ್ಟು ಪ್ರೀತಿಸಿದ್ದನು ಈಗ ಆಕೆಯಿಂದ ಹೇಗಾದರೂ ಬಿಡುಗಡೆ ಹೊಂದಿದರೆ ಸಾಕೆಂದುಬಗೆದನು' ಈತನ ಹಂಚಿಕೆ ವಸಂತಲಕ್ಷ್ಮಿಗೆ ಹೇಗೆ ಗೊತ್ತಿರಬೇಕು ? ಒಂದು ದಿನ ಬೆಳಕು ಹರಿಯಿತು – ಹಾಸಿಗೆಯಿಂದ ಎದ್ದು ನೋಡುತ್ತಾಳೆ – ಶಿವಶಂಕರನಿಲ್ಲ ಮಕ್ಕಳು ಹಸಿವಿನಿಂದ 'ಗೊಳೋ' ಎಂದು ಅಳಲಾರಂಭಿಸಿದವು ಈಕೆ ಏನು ಮಾಡುತ್ತಾಳೆ ! ಗಂಡಸರಿಂದ ಎಷ್ಟೊಂದು ಅನರ್ಥ ! ಎಂತಹ ಅನ್ಯಾಯ ! ಸಂಸಾರ ಮಾಡಿಕೊಳ್ಳುವವರೂ ಅವರೇ, ಹೆಂಗಸರನ್ನು ಅಡ್ಡದಾರಿಗೊಯ್ದು ಪಾಪದಕೂಪದಲ್ಲಿತಳ್ಳಿ – ಹೆಂಗಸರು ಕೆಟ್ಟರೆ ವರ್ಣಸಂಕರವಾಗುತ್ತದೆಂದು ಹೇಳುತ್ತಾರೆ ಈಗ ಸ್ವಾತಂತ್ರ್ಯದ ಮರ್ಮವೂ ಅಷ್ಟೆ, ಗಂಡಸರು ತಮ್ಮ ವಿಷಯಲಾಲಸೆಯನ್ನು ತೃಪ್ತಿಪಡಿಸಿಕೊಳ್ಳಲಿಕ್ಕಾಗಿ – ಮಹಿಳೆಯರಕಡೆಗೊಂದು

ಉದಾರ ರೀತಿಯನ್ನು ಅನುಸರಿಸಿದ ರೋಗನ್ನು ನಟಿಸುತ್ತಿದ್ದಾರೆ ಇಲ್ಲವಾದರೆ ಹೆಂಗಸರಿಗೆ ಯಾವ ಸ್ವಾತಂತ್ರ್ಯ ಕಡಿಮೆಯೆಂದು ಈಗ ಹೆಚ್ಚಿನ ಹೊಸ ಸ್ವಾತಂತ್ರ್ಯ ಕೊಡುವುದು ? ಹಿಂದೂ ಕೋಡ್‌ಬಿಲ್ ರಚಿಸಿದವರು ಇಂಗ್ಲೀಷ ಭಾಷೆಯಲ್ಲಿಯೋ ಕಾಯಿದೆಯಲ್ಲಿಯೋ ಪಂಡಿತರಿರಬಹುದು ಆದರೆ ಹಿಂದೂ ಧರ್ಮಶಾಸ್ತ್ರ ಓದಿದ ತಿಳಿದ ಪಂಡಿತ ಆಗಲಾರರು ಹೆಂಗಸರೇಕೋ ಡಾಕ್ಟರ್ ಅಂಬೇಡ್ಕರ್‌ರವರನ್ನು ಆಧುನಿಕಮನುವೆಂದು ಕರೆಯುತ್ತಾರ, ಆದರ ನಾವು ಒಪ್ಪಬೇಕಷ್ಟೆ ನಮ್ಮ ಸರ್ಕಾರ– ಎಲ್ಲರಿಗೂ ಅದೃಷ್ಟದ ಬಾಗಿಲು ತೆರೆದಿದೆ ಯೆನ್ನೋಣ ವಿವಾಹ ವಿಚ್ಛೇದನದಂತಹ ಸುಧಾರಣೆಗಳು ನಾಗರಿಕತೆಯ ಪ್ರತೀಕಗಳಲ್ಲ ಹಿಂದೂಧರ್ಮದ ನಾಶದದ್ಯೋತಕವದು ! ಹೆಂಗಸರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕೇಕೆ ? ಅವರು ವಿದ್ಯಾವತಿಯರಾಗಲಿ, ಬುದ್ಧಿವಂತೆಯರಾಗಲಿ – ಇದಕ್ಕೆ ಯಾರದೂ ಆಕ್ಷೇಪವಿಲ್ಲ ಗಂಡಸನ್ನು ಮೀರಿ, ಮೆಟ್ಟಿ ಆತನನ್ನು ನಾಶಮಾಡುವ ಸ್ವಾತಂತ್ರ್ಯವೇಕೆ ? ವಿವಾಹ ವಿಚ್ಛೇದನಕ್ಕೆ ಹೆಂಗ-ಸರದೇ ಬೆಂಬಲವಿದ್ದರೆ, ವಿವಾಹವೇ ಬೇಡವೆಂಬರ್ಥದ ಮಸೂದೆಯನ್ನೇಕೆ 'ಪಾಸ್' ಮಾಡಿಸಬಾರದು ? ಪಾಪ ! ನಮಗಾದರೂ ಸಂಸಾರಮಾಡಿಕೊಂಡು ಕಷ್ಟಪಡುವುದು ತಪ್ಪುತ್ತದಲ್ಲವೇ ? ಅವರಿಗೆ ಸ್ವಾತಂತ್ರ್ಯ ಸಿಕ್ಕಿದರೆ ವಸಂತಲಕ್ಷ್ಮಿಗಾದ ಗತಿಯೇ ಅವರಿಗೂ ಆಗದಿರಲಾರದು ಇಷ್ಟಾಗಿಯೂ ಈ ಸ್ವಾತಂತ್ರ್ಯವ ಅರ್ಥವನ್ನು ಸ್ಪಷ್ಟಪಡಿಸುವ ಸುಶಿಕ್ಷಿತ, ವಿವೇಕಿ ಮಹಿಳೆಯರು ಒಬ್ಬಿಬ್ಬರಾದರೂ ನಮ್ಮಲ್ಲಿದ್ದರೆ, ನಮ್ಮ ಹೆಂಗಸರು ಆ ಸ್ವಾತಂತ್ರ್ಯಕ್ಕೆ ಅರ್ಹರೆಂದು ಹೇಳಬಹುದು ಆದರೆ ನಮ್ಮ ದೌರ್ಭಾಗ್ಯವೋ ಏನೋ ವಿಚಾರಮತಿಯಾದ ಹೆಂಗಸೇ ಅಪರೂಪ

ಈಗ ವಸಂತಲಕ್ಷ್ಮಿಯ ವಿಚಾರ– ಆಕೆ ಕನಸಿನಲ್ಲಿಯೂ ಹೀಗೆ ಸಂಭವಿಸೀತೆಂದು ಭಾವಿಸಿರಲಿಲ್ಲ ತಾರುಣ್ಯದ ರಕ್ತ ನಾಡಿನಾಡಿಯಲ್ಲಿ ಸಂಚರಿಸುತ್ತಿದ್ದ ಒಂದು ಕಾಲ ಅದೆಷ್ಟು ಸೊಗಸಾಗಿತ್ತೆಂದರೆ ಈ ಪ್ರಪಂಚವೇ ಅವಳದಾಗಿತ್ತು ನಂತರ ಅವಳ ಒಡನಾಡಿಯಾಗಿ ಶಿವಶಂಕರ ಕೂಡಿದ ಎಷ್ಟು ಮಧುಚಂದ್ರನನ್ನು ಕಂಡರೋ ! ಆದರೆ ಈಗ ಬಾಳದೋಣಿಯೇ ಮಗುಚಿತು ನಾನು ತಾಯಿಯಮಾತನ್ನು ಕೇಳಬೇಕಿತ್ತು ತಂದೆಯ ಹಿತದ ನುಡಿಗಳಿಗೆ ಬೆಲೆಕೊಡಬೇಕಿತ್ತು ಕೊನೆಯಪಕ್ಷ ಶಿವಶಂಕರನನ್ನು ಪ್ರೀತಿಸಿದ್ದೇನೆಂದಾದರೂ ಹೇಳಬೇಕಾಗಿತ್ತು ಯಾವುದನ್ನೂ ಮಾಡದೆ ಕಳ್ಳರಂತೆ ಆತನೂ

ನಾನೂ ಒಡಿಒಂದೆವು ವಿನಾಶಕಾಲಕ್ಕೆ ವಿಪರೀತಬುದ್ಧಿಯೆಂಬ ಮಾತು ಸುಳ್ಳಲ್ಲ ಆತನ ಹೃದಯವನ್ನು ಪರೀಕ್ಷಿಸದೆ ಮೋಸಹೋದ' ಎಂದು ದುಃಖಿಸಿದಳು ಅದು ಅರಣ್ಯರೋದನ! ಇನ್ನು ಮುಂದಿನ ದಾರಿ ಯಾವುದು? ದುಡಿಯುವುದೇ? ಶ್ರೀಮಂತರ ಹುಡುಗಿಯಾಗಿ ಕೂಲಿ ಕೆಲಸ ತಿಳಿಯದು ಬೇಡುವುದು ಅಭಿಮಾನಕ್ಕೆ ಕುಂದು ಅಷ್ಟರವರೆಗ ಆ ಕೆಲಸವನ್ನು ಶಿವಶಂಕರ ಮಾಡುತ್ತಿದ್ದ ಕಳ್ಳತನವು ನಭ್ಯರಿಗೆ ಹೇಳಿಸಿದ್ದಲ್ಲಿ ಅವಳು ಏಕಾಂಗಿಯಾಗಿದ್ದರೆ, ಅವಳ ಜೀವನ ಹೇಗೊ ನಡೆಯುತ್ತಿತ್ತು ಆ ನಾಲ್ಕುಮಕ್ಕಳಿವೆಯಲ್ಲ

ಶಾಪದ ನಾಲ್ಕು ಮುಖಗಳು! ಅವಳ ಸ್ತ್ರೀತ್ವ, ಮಾನಮರ್ಯಾದೆಗಳ ಮೇಲೆ ಚಪ್ಪಡಿ ಕಲ್ಲು ಎಳೆದವುಗಳು ಶಿವಶಂಕರನ ವಿಜಯಕೇತನದ ಚಿಹ್ನೆಗಳು! ಪಾಪದ ಪಿಂಡಗಳು!!

ರಾಧಾಕೃಷ್ಣರಾಯರಿಗೆ ಪರೋಕ್ಷವಾಗಿ ಮಗಳ ವಿಚಾರವೆಲ್ಲ ತಿಳಿದಿತ್ತು ಆದರೆ ಅವಳು ತನ್ನ ಪಾಲಿಗೆ ಇಲ್ಲವೆಂದು ಮೊದಲೇ ಭಾವಿಸಿಬಿಟ್ಟಿದ್ದರು ಗೋದೂಬಾಯಿಯ ಕರುಳುಮಾತ್ರ ಕೊರೆಯುತ್ತಿತ್ತು ಹೃದಯ ಮಿಡಿಯುತ್ತಿತ್ತು ಗಂಡನ ನಿಷ್ಠುರಸ್ವಭಾವದ ಪ್ರಭಾವ ಕೊನೆಕೊನೆಗೆ ಅವಳಮೇಲೂ ಉಂಟಾಗದೆ ಇರಲಿಲ್ಲ — ಮಗಳು ಗೈದ ಹೇಯಕಲಸಕ್ಕಾಗಿ, ಆದರೆ ಮಗಳು ಎಂದಿಗೂ ಮಗಳೇ

* * * *

'ಹೊಣೆಯಾರಿಗಾಗಿ?' ಎಂಬ ವಿಷಯದಕುರಿತು ಆ ದಿನ ನಡೆದ ಚರ್ಚಾಕೂಟದಲ್ಲಿ ರಾಧಾಕೃಷ್ಣರಾಯರು ಸೊಗಸಾದ ಉಪನ್ಯಾಸವನ್ನು ಕೊಟ್ಟರು, 'ಹೊಣೆಯಾರಿಗಾಗಿಯೂ ಅಲ್ಲ ಅದರ ನಿಜವಾದ ಅರ್ಥವನ್ನು ತಿಳಿದವರಿಗೆ, ಅದಕ್ಕಾಗಿ ಸರ್ವಸ್ವವನ್ನು ತ್ಯಜಿಸಿದವರಿಗೆ, ಕೊನೆಗೆ ಅದನ್ನು ಉಳಿಸಿಕೊಳ್ಳುವವರಿಗೆ— ಸ್ವಾತಂತ್ರ್ಯದಕ್ಕುತ್ತದೆ ನಮ್ಮ ಹೆಂಗಸರಿಗೆ ಅದರ ಅರ್ಥವೂ ತಿಳಿಯದು ಸರ್ವಸ್ವವನ್ನು ತ್ಯಾಗಮಾಡುವುದು ಆಗದ ಕೆಲಸ ಉಳಿಸಿಕೊಳ್ಳಲಿಕ್ಕಂತೂ ಮೊದಲೇ ತಿಳಿಯದು ಅಮೇರಿಕಾ, ಇಂಗ್ಲಂಡ್, ಫ್ರಾನ್ಸ್ ಮುಂತಾದ ಪಾಶ್ಚಿಮಾತ್ಯ ದೇಶಗಳಲ್ಲಿರುವ ಶ್ರೀಮಂತ ರಮಣಿಯರಂತೆ ಬಣ್ಣದ ಬೀನಣಿಗೆಗಳಾಗಿ— ಗೃಹಕೃತ್ಯದ ಕಲಸ, ಸಂಸಾರನಿರ್ವಹಣ, ಸಂತಾನಪೋಷಣೆ ಮುಂತಾದ ಮಾತೃಪ್ರಧಾನವಾದ ಕೆಲಸಗಳನ್ನು ಬಿಟ್ಟು, ಬೀದಿಬೀದಿಗಳಲ್ಲಿ ಅಲೆದಾರು ನಮ್ಮ ಹೆಂಗಸರು ಹೆಚ್ಚೇಕೆ, ಅವರನ್ನೇ ಮೀರಿಸಬಲ್ಲರು ಹದಿನೈದು

ದಿನಕ್ಕೊಂದು ವಿವಾಹ, ತಿಂಗಳಿಗೆರಡು ವಿವಾಹವಿಚ್ಛೇದನಗಳನ್ನು ಮಾಡಿ-ಕೊಳ್ಳಲು ನಮ್ಮ ಹೆಂಗಸರೇನೂ ಕಡಿಮೆಯಿಲ್ಲ ಹತ್ತಾರು ಹೆಣ್ಣುಮಕ್ಕಳಿರುವ ತಂದೆಗೆ- ಆಸ್ತಿಯಲ್ಲಿ ಪಾಲುಕೊಡೆಂದು ಗಂಡುಮಕ್ಕಳ ಜೊತೆಗೆ ಹೆಣ್ಣುಮಕ್ಕಳೂ ಜಗಳಾಡಿದರೆ ಆ ತಂದೆಗೆ ಕೆರೆಭಾವಿಯೇ ಗತಿ ಗಂಡನನ್ನು ಜನವರಿ ಇಪ್ಪ-ತ್ತಾರನೇ ದಿನಾಂಕದಿಂದ ಹೊಸದಾಗಿ ಲಭಿಸಿದ ಸಮಾನಸ್ವಾತಂತ್ರ್ಯದ ಹಕ್ಕು ಚಲಾಯಿಸಿ- ಲಾಗಹಾಕಿಸುತ್ತಾಳೆ ಮನೆಯಲ್ಲಿರುವ ಪ್ರಾಯದ ಹೆಂಗಳೆಯರಿಗೆ 'ಸ್ವಾತಂತ್ರ್ಯ' 'ಹಕ್ಕುಹೊಣೆ'ಗಳ ಸಿಹಿಯನ್ನು ಉಣಿಸಿ ಅತ್ತಿಂದಿತ್ತ ತಿರುಗಾಡುವ ಪ್ರಾಣಿಗಳಾಗಿ ಪರಿವರ್ತಿಸಿ ಅವರನ್ನು ತಮ್ಮ ಒಲಿಯಲ್ಲಿ ಕಡಹ ಬೇಕೆಂದು ಸವಿಕನಸಿನಲ್ಲಿ ಲೋಲಾಡುವ ಸಂಕುಚಿತಭಾವದ ಒಂದು ಪಂಗಡದ ಪರಿಗೆ ಈ ಹಕ್ಕು, ಹೊಣೆ, ಬಾಧ್ಯತೆ, ಮತ್ತಾರಿಗೂ ಅಲ್ಲ ಇದಕ್ಕೆ ನನ್ನ ಮಗಳೇ ಸಾಕ್ಷಿ ಆಕೆ ಈಗ ಅತ್ಯಂತ ನವೀನವಾದ, ಮೊನ್ನೆ ಮೊನ್ನೆ ಪ್ರಾಪ್ತವಾದ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದಾಳೆ ನಿಮಗೂ ಇದೇ ತರದ ಹಕ್ಕು, ಹೊಣೆಬೇಕೇ ? ಬೇಕಾದವರು ಕೈಎತ್ತಿರಿ ನೋಡೋಣ- ಎಂದರು ಎಲ್ಲಾ ಹೆಂಗಸರೂ ತಲೆತಗ್ಗಿಸಿದರು ಯಾರೂ ಪಿಟ್ಟೆಂದು ತುಟಿತೆರೆಯಲಿಲ್ಲ

ಅಲ್ಲಿ ನೆರೆದಿದ್ದ ಎಲ್ಲಾ ಹೆಂಗಸರೂ 'ಹೊಣೆಯಾರಿಗಾಗಿ ?' ಎಂದು ತಮ್ಮ ತಮ್ಮೊಳಗೇ ಪ್ರಶ್ನಿಸಿಕೊಂಡರು ಹಿಂದೂಶಾಸ್ತ್ರ ಕ್ರೋಢೀಕರಣ ಮಸೂದೆ ಪರಮ ಅನ್ಯಾಯವಾದುದು ಹಿಂದುತ್ವದಜೊತೆಗೆ ಸ್ತ್ರೀತ್ವವೂ ಇದರಿಂದ ನಾಮಶೇಷವಾಗುತ್ತದೆಯೆಂಬುದರಲ್ಲಿ ಸಂದೇಹವಿಲ್ಲವೆಂದು ಹೇಳಿಕೊಳ್ಳುತ್ತಾ ಮನೆಯಕಡೆಗೆ ತೆರಳಿದರು ಹೆಂಗಸರು ಆ ದಿನದ ಸಭೆಗೆ ಗಂಡಸರನ್ನು ಆಹ್ವಾನಿಸಿದ್ದರಿಂದ ಎಷ್ಟೊಂದು ಪ್ರಯೋಜನವಡೆದರಲ್ಲವೇ ? ಅಂದಿನಿಂದ- 'ನಮಗೀ ಸ್ವಾತಂತ್ರ್ಯದ ಗೊಡವೆಯೇಬೇಡ ಗಂಡನಿಂದ ಹೆಂಡತಿ, ತಾಯಿಯಿಂದ ಮಗಳು, ತಂದೆಯಿಂದ ಮಗ, ಅಣ್ಣನಿಂದ ತಮ್ಮ ಮೊದಲಾದವರನ್ನು ಅಗಲಿಸುವ- ಹೆಂಗಸರಿಗೆ ಪ್ರತ್ಯಪ್ರಾಯವಾದ ಈ ಸ್ವಾತಂತ್ರ್ಯ ಬೇಡವೇ ಬೇಡ ಸರಕಾರವು ಅನುಸರಿಸುತ್ತಿರುವ ಸಾಮಾಜಿಕ ನ್ಯಾಯ ಮತ್ತು ನೀತಿಯು ಅಖಿಲ ಜನತಾಕಲ್ಯಾಣದ ದೃಷ್ಟಿಯಿಂದ ನಿಜವಾಗಿಯೂ ಕುಠಾರಪ್ರಾಯವಾಗಿದೆಯೆಂದು ಅಲ್ಲಿ ಕೂಡಿದ್ದ ಎಲ್ಲಾ ಮಹಿಳೆಯರೂ ಏಕಕಂಠದಿಂದ ಅಭಿಪ್ರಾಯ ಹೊರಗೆಡಹಿದರು

ಶಿವಶಂಕರನಂತಹ ಜನರಿದ್ದರೆ 'ಸ್ವಾತಂತ್ರ್ಯದ ಹೆಸರಿನಲ್ಲಿ ಹೆಂಗಳೆಯರ ತಲೆಕೆಡಿಸಿ, ಅವರ ಜೀವನವನ್ನೇ ಹಾಳುಮಾಡವೆ ಇರುತ್ತಾರೆಯೇ ? ವಸಂತ ಲಕ್ಷ್ಮಿಯಂತೆ ಏನೂ ಅರಿಯದೆ ಮುಗ್ಧಸ್ವಭಾವದಿಂದ ದುಡುಕಿ, ತಲೆ ತಿರುಕ ತರುಣನ ಕಾಮ ಪಿಶಾಚಿಗೆ ಬಲಿಬಿದ್ದು ಪಡಲಾರದ ಕಷ್ಟವನ್ನು ಪಡುವುದಿದ್ದರೆ ಈ ಹೊಣೆ ಯಾರಿಗೆಬೇಕು ? ಹಾಗಾದರೆ ಅವಳಗತಿಯೇನಾಯಿತೆಂದು ಅರಿಯಲು ಎಲ್ಲರಿಗೂ ಕುತೂಹಲವಿರಬಹುದು 'ನನ್ನ ವಿಚಾರದ ಗೊಡವೆ ಯಾರಿಗೂ ಬೇಡ'ವೆಂದು ಹೇಳಿದರೇನುಗತಿ ? ಮುಂದಿನ ಜನವರಿ ೨೬ ನೇ ದಿನಾಂಕ ಬಂದಾಗ, ವನಿತಾ ಸೇವಾ ಸಮಾಜದಲ್ಲಿ ಎಲ್ಲಿಯಾದರೂ ಪ್ರಕಟವಾದರೆ ಆಗ ಅವಳನ್ನು ವಿಚಾರಿಸಬಹುದು

---

# ಈಗ ಅದನ್ನು ಹೇಳಬಹುದು

'ಪತ್ರಿಕೆಯಲ್ಲೇನು ಸುದ್ದಿ ?'

'ನೆಹ್ರು-ಲಿಯಾಖತ್ ಒಪ್ಪಂದ'

'ಅದೇಕೆ ?'

'ಇತ್ತೀಚಿಗೆ ನಡೆದ ಪಾಕೀಸ್ತಾನದಲ್ಲಿಯ ಪರಿಸ್ಥಿತಿ ಸಂಬಂಧದಲ್ಲಿ, ಅಲ್ಲಿ ನಡೆದ ಗಲಭೆ ಹತ್ಯಾಕಾಂಡದ ಹಿನ್ನೆಲೆಯಲ್ಲಿ ನೆಲಸಿರುವ ಅಶಾಂತಿಯನ್ನು ಕೂಲಂಕಷವಾಗಿ ಚರ್ಚಿಸುವುದಕ್ಕಾಗಿ ಈ ಇಬ್ಬರು ಧುರೀಣರ ಸಂದರ್ಶನ ನಡೆದಿದೆ'

'ಯಾವಾಗ ?'

'ಮೊನ್ನೆ ರವಿವಾರ ಎರಡನೆಯ ದಿನಾಂಕದಲ್ಲಿ ಈ ಬಗ್ಗೆ ಅಲ್ಪಸಂಖ್ಯಾಕರಿಗೆ ಸಂಪೂರ್ಣ ಸಂರಕ್ಷಣೆಯ ಆಶ್ವಾಸನೆಯನ್ನೀಯುವ ಸಂಯುಕ್ತ ಹೇಳಿಕೆಯನ್ನು ಹೊರಡಿಸುವ ವಿಚಾರವಿದೆ ಅವರೀರ್ವರಿಗೆ'

'ನೀನು ಏನೇ ಹೇಳು, ನಮ್ಮ ಸರ್ಕಾರದ ನೀತಿ, ಅದು ಅನುಸರಿಸಿದ ಧೋರಣೆ ನನಗೇಕೋ ಸರಿಬೀಳುವುದಿಲ್ಲ ನೋಡು, ಮನೆಗೆ ಬೆಂಕಿ ಬಿದ್ದಾಗ ಬಾವಿ ತೋಡುವ ನೀತಿ ಅನುಸರಿಸುವವರನ್ನು ಹುಚ್ಚರೆಂದೇ ಕರೆಯಬೇಕು. ಮೊನ್ನೆ ಹೇಳಿದೆಯಲ್ಲ-ಡಾಕ್ಟರ್ ಶ್ಯಾಮಪ್ರಸಾದ ಮುಖರ್ಜಿ ಮತ್ತು ಮಾನ್ಯ ಕೆ ಸಿ ನಿಯೋಗಿಯವರ ರಾಜೀನಾಮೆಯ ವಿಚಾರ ಅವರನ್ನು ಬೇಕಾದರೆ ಬುದ್ಧಿವಂತರೆಂದು ಕರೆಯಬಹುದು ಪಾಕೀಸ್ಥಾನದ ಮುಂಡೇಗಂಡರು ಆಡಿದ ಮಾತನ್ನೆಂದಿಗೂ ಪಾಲಿಸುವವರಲ್ಲವೆಂದು ಅವರಿಗೂ ತಿಳಿದಿದೆ. ನಮಗೂ ತಿಳಿಯುತ್ತದೆ ಹಿಂದುಗಳನ್ನೆಲ್ಲ-ಒಂದಲ್ಲ ಒಂದು ರೀತಿಯಲ್ಲಿ ನಾಶ ಮಾಡಬೇಕೆನ್ನುವ ಅವರ ಕುಟಿಲ ಕಾರಸ್ಥಾನವನ್ನು ತಿಳಿಯದೆ ನಾವು ಅವರನ್ನು ಯೋಚನೆಗಾಗಿ ಸಂಧಿಸುವುದೇ? ಗೋ ಮಾಂಸ ತಿನ್ನುವ ಅವರಿಗೆ ಶಾಂತಿ ಮಂತ್ರ ಉಪದೇಶಿಸುವುದೇ ?'

'ಮುಂದೊದಗುವುದನ್ನು ಮೊದಲೇ ಊಹಿಸುವುದು ಶಕ್ಯವೇ ? ಏಕೋ ಪೂರ್ವ ಬಂಗಾಲದಲ್ಲಿ ಗಲಭೆ, ಹತ್ಯಾಕಾಂಡಗಳು ನಡೆದವು ಅಲ್ಪ ಸಂಖ್ಯರು

ತುಂಬಾ ಹಾನಿಗೀಡಾದರು ಆದರೆ ಪಾಕೀಸ್ತಾನಿಗಳು ಅವಿವೇಕದಿಂದ ವರ್ತಿ-
ಸಿದರೆಂದು ನಾವೂ ಹಾಗೆಯೇ ಮಾಡಿದರೆ ನಮ್ಮ ನಾಗರಿಕತೆ, ನಮ್ಮ ಸಂಸ್ಕೃತಿ
ಧರ್ಮದ ತಿರುಳು, ಕರ್ಮಕಾಂಡಃ ಎಲ್ಲವೂ ನಷ್ಟವಾಗುವುದಿಲ್ಲವೇ ?"

'ಹೌದು, ಹೌದು, ನಮ್ಮ ಸಂಸ್ಕೃತಿ, ನಾಗರಿಕತೆಯೆಂದು ಉದ್ದುದ್ದ
ವಾಕ್ಯಗಳನ್ನು ಉಪಯೋಗಿಸಬೇಡ ಮತ್ತೆ ಅವರಿಗೆ ನಮ್ಮ ಹೆಂಡಂದಿರನ್ನು
ಮಾರಿಕೊಳ್ಳಬೇಕೆಂದು ನೀನೇಕೆ ಹೇಳಲಿಲ್ಲ ? ನಾವು ಬೆನ್ನು ಬಗ್ಗಿಸಿದಷ್ಟು
ಅವರು ಸವಾರಿ ಮಾಡುವುದು ಹೆಚ್ಚು ಹೈದರಾಬಾದಿನಲ್ಲಿ ನಡೆಯಿಸಿದಂತೆ
ಸೈನಿಕ ಕ್ರಮಗಳನ್ನು (Military Actions) ಜರುಗಿಸಿ, ಅವರನ್ನು ಹಣ್ಣಿಗೆ
ತರಬೇಕಿತ್ತು ಆಗ ನಮ್ಮ ಪೌರುಷಕ್ಕೆ ಕಳೆ ಬರುತ್ತಿತ್ತು'

'ನೀನು ಇಲ್ಲಿಯೇ ತಪ್ಪಿದೆ ಮಹಾಭಾರತ ರಾಮಾಯಣ ಭಾಗವತಗಳ
ಆಧಾರದಿಂದಲೇ ಮಾತಾಡೋಣ ಪಾಂಡವರು ಕೌರವರಿಂದ ಎಷ್ಟು ನೊಂದರು!
ಎಷ್ಟು ಪಡಲಾರದ ಕಷ್ಟಪಟ್ಟರು ! ಗಂಡಂದಿರೊಡನೆ ದ್ರೌಪದಿಯೂ ಅಸಹ
ನೀಯಯಾತನೆಯನ್ನು ಹೊಂದಿದಳು ಹಾಗಾದರೆ ಕೌರವರನ್ನು ಹಣ್ಣಿಗೆ
ತರಲು ಪಾಂಡವರಲ್ಲಿ ವೀರರಿಲ್ಲವಾಗಿತ್ತೇ ? ಭೀಮ, ಅರ್ಜುನ ಯಾರ ಮಾತಿ
ಗಾಗಿ ತಡೆದರು ?—ಧರ್ಮರಾಯನ ಮಾತಿಗಾಗಿಯಲ್ಲವೇ ? ಕೊನೆಗೆ ಅರ್ಧ
ರಾಜ್ಯಕ್ಕಾಗಿ ಕೌರವನಿರುವಲ್ಲಿಗೆ ಶ್ರೀಕೃಷ್ಣನನ್ನು ಸಂಧಾನಕ್ಕಾಗಿ ಕಳುಹಿಸಿದರು
ಕೊನೆಗೂ ಕೌರವರ ನಾಶ ತಪ್ಪಲಿಲ್ಲ ಒಟ್ಟಿನಮೇಲೆ ಎಲ್ಲವುಗಳಿಗೂ ಕಾಲ
ಬರಬೇಕು ನಮ್ಮಿಚ್ಛೆಯಂತೆ ಯಾವುವೂ ನಡೆಯಲಾರವು ಅದಲ್ಲದೆ ಮನೆಗೆ
ನೆರೆಮನೆ, ಊರಿಗೆ ನೆರೆಯೂರಿದ್ದಂತೆ ಒಂದು ರಾಷ್ಟ್ರಕ್ಕೂ ನೆರೆಯ ರಾಷ್ಟ್ರವೆಂದು
ಇದ್ದೇ ಇದೆ ಆ ನೆರೆಯ ರಾಷ್ಟ್ರದೊಡನೆ ಮುಯ್ಯಿಗೆ ಮುಯ್ಯಿ ನೀತಿಯನ್ನು
ಅನುಸರಿಸುವುದು ಸರಿಯಲ್ಲವೆಂದು ಮನಗಂಡೇ ನಮ್ಮ ಪ್ರಧಾನ ಮಂತ್ರಿ
ನೆಹರೂ ಒಪ್ಪಂದದ ಸುಗಮ ದಾರಿಯನ್ನು ಅನುಸರಿಸಿದರು ಇದರಿಂದೇನು
ಕೆಡುಕಾಯಿತು ? ಒಪ್ಪಂದ ನಡೆದಂದಿನಿಂದ ನಾವೇನೂ ಕೆಟ್ಟ ವರ್ತಮಾನ
ಗಳನ್ನು ಕೇಳುತ್ತಿಲ್ಲ ಎಂದಿನ ವರೆಗೆ ಮಾನವನಿಗೆ ಹೃದಯವಿದೆಯೋ ಅಂದಿನ
ವರೆಗೆ ಒಂದಿಲ್ಲೊಂದು ದಿನ ಆತ ಪರಿವರ್ತನೆ ಹೊಂದಿಯೇ ಹೊಂದುತ್ತಾನೆ
ಮುಸ್ಲಿಮರಂತೆ ರಾಕ್ಷಸೀ ಸ್ವಭಾವಿಗಳು ನಮ್ಮ ಹಿಂದುಗಳಲ್ಲಿಯೂ ಇದ್ದಾರೆ
ನಮ್ಮಲ್ಲಿಯ ಸಾತ್ವಿಕ ಸ್ವಭಾವವುಳ್ಳ ಸಭ್ಯರು ಅವರಲ್ಲಿಯೂ ಇದ್ದಾರೆ ಆದರೆ

ಇಂತಹ ರಾಜಕೀಯ ಧೋರಣೆಯನ್ನು ಖಂಡಿಸುವುದು ಸಾಮಾನ್ಯ ಜನರ ಪಾಂಡಿತ್ಯಕ್ಕೆ ಮೀರಿದ ಕೆಲಸ'

'ಸರಿ, ಸರಿ, ಈಗ ಒಪ್ಪಿದೆ ನಿನ್ನಂತಹ ಜನ ಸಿಗಬೇಕಯ್ಯಾ—ನಮಗೆ ಅರ್ಥವಾಗಲಿಕ್ಕೆ ಬಿಡಿಸಿ ಹೇಳಲಿಕ್ಕೆ ತಾವು ತಿಳಿದುದನ್ನು ಸರಿಯಾಗಿ ಇತರರಿಗೆ ತಿಳಿಯ ಹೇಳುವುದೇ ಕಷ್ಟದ ಕೆಲಸ ಜನರು ಒಂದು ಸಣ್ಣ ವಿಷಯ ಕೇಳಿದರೆ ಅದಕ್ಕೆ ಉಪ್ಪು, ಖಾರ ಹಚ್ಚಿ ಮಸಾಲೆ ಮಾಡಿಬಿಡುತ್ತಾರೆ ಸಾವಿರ ಸಂಗತಿಗಳನ್ನು ಕಿವಿಯಲ್ಲಿ ಕೇಳುವುದಕ್ಕಿಂತ ಒಂದು ಸಂಗತಿಯನ್ನು ಪರಾಂಬರಿಸಿ ಕಣ್ಣಿಂದ ನೋಡುವುದೇ ಲೇಸು ಮೊನ್ನೆ ನನ್ನ ಮೇಲೊಂದು ಅಪವಾದ ಬರಲಿಲ್ಲವೇ? ನೆರೆಮನೆ ಗೋವಿಂದರಾಯರ ಮಗಳು ಸೀತಾಲಕ್ಷ್ಮಿಗೂ ನನಗೂ ಸಂಬಂಧ ಹೊಸೆದುಬಿಟ್ಟರು ಜನರು'

'ಛೀ, ಪರಮ ಅನ್ಯಾಯ! ಮೊನ್ನೆ ಮೊನ್ನೆ ಆಕೆಯನ್ನು ವಾಸು ಮದುವೆ ಮಾಡಿಕೊಂಡಿದ್ದ ಅವನಿಗೆಷ್ಟು ಅಸಮಾಧಾನವಾಗಬಹುದು! ತನ್ನ ಹೆಂಡತಿಯ ವಿಷಯದಲ್ಲಿ ಕೆಟ್ಟ ಮಾತನ್ನು ಕೇಳಿದರೆ ಆತನ ಮನಸ್ಸು ಎಷ್ಟು ವಿಕಲ್ಪವಾಗಬೇಡ! ಅದಿರಲಿ ಜನರೇಕೆ ಹಾಗೆ ಆಡಿಕೊಂಡರು? ನನಗೆ ಸ್ವಲ್ಪ ತಿಳಿಸು'

'ಅದು ನಡೆದುದು ಹೀಗೆ— ಹೇಳುತ್ತಾ ಹೋದರೆ ಅದೊಂದು ಕತೆಯೇ ಆಗಿಬಿಟ್ಟೀತು ಸ್ವಲ್ಪದರಲ್ಲಿ ಹೇಳುತ್ತೇನೆ, ಕೇಳು ಆಗ ಜನರ ಬಾಯಿಂದ ಹೊರಬೀಳುವ ಮಾತುಗಳು ಎಷ್ಟು ಅಭದ್ರವಾದವು ಎಂದು ನೀನೇ ತಿಳಿಯುವಿ' ಎಂದು ಸೀತಾಲಕ್ಷ್ಮಿಯ ವಿಚಾರವನ್ನೆತ್ತಿದನು

* * * *

ಹೊನ್ನೂರು ಗೋವಿಂದರಾಯರಿಗೆ ಸೀತಾಲಕ್ಷ್ಮಿಯೊಬ್ಬಳೇ ಮಗಳು ಸೀತೆಯಂತೆ ಪವಿತ್ರೆಯೂ ಲಕ್ಷ್ಮಿಯಂತೆ ಸುಂದರಿಯೂ ಆಗಿದ್ದಳು ರಾಜು ಅವಳ ಬಾಲ್ಯದ ಗೆಳೆಯ ಒಟ್ಟಿಗೆ ಆಡಿರುವರು, ಓದಿರುವರು ಅವಳು ಅವನನ್ನು ರಾಜಣ್ಣನೆಂದೇ ಕರೆಯುತ್ತಿದ್ದಳು ಅವರಿಬ್ಬರ ಸ್ಥಿತಿಗತಿಗಳ ಅಂತಸ್ತಿನಿಂದ ನೋಡಿದರೆ— ರಾಜು ಅವಳನ್ನು ಪ್ರೀತಿಸಿದರೂ ವ್ಯರ್ಥವೇ—ಕಾರಣ ಆತ ಬಡವ, ಸೀತಾಲಕ್ಷ್ಮಿ ಶ್ರೀಮಂತೆ ಪ್ರಬುದ್ಧಳಾದಂತೆ ರಾಜುವಿನಲ್ಲಿ ಆಕೆ ಕಂಡುಕೊಂಡುದು ಒಂದೇ ಒಂದೆಂದರೆ—ಆತನ ಮೃದು ಸ್ವಭಾವ, ಕೋಮಲ

ಹೃದಯ  ಆತನ ಮನಸ್ಸು ಎಷ್ಟು ಸರಳ ! ವಿಚಾರವೆಷ್ಟು ಉದಾತ್ತ ! ಬುದ್ಧಿ ಎಷ್ಟು ಚುರುಕು ! ಸಂಪತ್ತಿದ್ದರೆ ಒಂದು ದಿನದಲ್ಲಿ ಕರಗಿಸಿಬಿಡಬಹುದು  ಆದೇ-ವಿದ್ಯಾ–ಬುದ್ಧಿ ಇದ್ದರೆ ಸಾಯುವ ವರೆಗೆ ಅದು ನಮ್ಮನ್ನು ಕಾಪಾಡಬಲ್ಲುದು  ಸೀತಾಲಕ್ಷ್ಮಿ ಆತನ ಉದಾರ ಹೃದಯಕ್ಕೆ ಮಾರು ಹೋದಳು–ಫಲದ ಭಾರ ದಿಂದ ಗಿಡ ನೆಲಕ್ಕೆ ಬಾಗುವಂತೆ !

*  *  *  *

ಹುಡುಗಿ ಪ್ರಾಪ್ತ ವಯಸ್ಕಳಾದೊಡನೆಯೇ ತಂದೆ ವರನ ಶೋಧನೆಯನ್ನು ಮಾಡಲಾರಂಭಿಸಿದರು  ಅವರ ಹೆಂಡತಿ ಭಾಗೀರಥಿಯಮ್ಮ–ತಮ್ಮ ತಮ್ಮನ ಮಗ ವಾಸುವಿಗೆ ಮಗಳನ್ನು ಕೊಡುವಂತೆ ಗಂಡನಿಗೆ ಸಲಹೆ ಕೊಟ್ಟರು  ಹೆಂಡತಿಯ ತಾಳಕ್ಕೆ ಹೆಜ್ಜೆ ಹಾಕದಿದ್ದರೆ ಗಂಡ ಸುಸೂತ್ರವಾಗಿ ಸಂಸಾರ ನಿರ್ವಹಿಸಿಕೊಂಡು ಹೋಗುವುದು ಸಾಧ್ಯವೇ ? ವಾಸುವಿನಲ್ಲಿ ಯಾವ ಸದ್ಗುಣಗಳೂ ಇರಲಿಲ್ಲ  ಅವನ್ನೆಲ್ಲ ಮೊದಲೇ ಪೇಟೆಯಲ್ಲಿ ಮಾರಿಬಿಟ್ಟಿದ್ದನೋ ಏನೋ ! ಇಸ್ಪೀಟ್ ಆಟದ ಮರ್ಮ ಏನು ? ಬೀಡಿ-ಸಿಗರೆಟ್‌ಗಳಲ್ಲಿ ಎಷ್ಟು ತರ ? ಸಿನೇಮಾ ತಾರೆಯರಲ್ಲಿ ಯಾರು ಹೆಚ್ಚು ಸುಂದರಳು ? ಸೂಳೆಮನೆ ಯಾವ ಓಣಿ ಯಲ್ಲಿದೆ ? ಜಾರೆಯರ ವಶೀಕರಣ ಹೇಗೆ ? ಯಾರಿಗೆ ಯಾರು ದಲಾಲಿ ? ಮುಂತಾದವುಗಳಲ್ಲಿ ಆತನ ತಲೆ ಬಹಳ ಚುರುಕು  ಸೀತಾಲಕ್ಷ್ಮಿಯಂತೂ ತನ್ನನ್ನೇ ಮದುವೆಯಾಗುವವಳೆಂದು ಆತ ಮೊದಲೇ ನಿರ್ಧರಿಸಿದ್ದ  ಈಗ ಅಂತಹ ಸುಯೋಗವೂ ಒದಗಿಬಂತು  ಆತನಿಗೆ ಸಂತೋಷವೇ ಸಂತೋಷ  ಏಕೆಂದರೆ ಮೊದಲಿನಿಂದಲೂ ಆಕೆ ಅವನನ್ನು ದ್ವೇಷಿಸುತ್ತಿದ್ದಳು  ಈಗ ಅವಳ ಸೊಕ್ಕು, ಜಂಭವನ್ನೆಲ್ಲ ಮುರಿಯುವೆನೆಂದು ಪಣ ತೊಟ್ಟನು  ಲಜ್ಜಾವತಿ ಯಾದ ಸೀತಾಲಕ್ಷ್ಮಿ ಹೇಗೆ ಆತನನ್ನು ಮದುವೆಯಾಗಲಾರೆ, ಭಾವನನ್ನೇ ಮದುವೆಯಾಗುವುದಿದ್ದರೆ ತನಗೆ ಮದುವೆಯೇ ಬೇಡವೆಂದು ಹೇಳಿಯಾಳು ? ಅವಳ ಮನಸ್ಸಿನ ದುಗುಡವೇನೇ ಇರಲಿ, ಅದು ಗೌಣ  ಮುಖ್ಯ ನಡೆಯುವ ಶುಭಕಾರ್ಯ ನಡೆಯಲೇಬೇಕಷ್ಟೆ  ಅವಳನ್ನು ವಾಸುವಿಗೆ ಕೊಟ್ಟು ಲಗ್ನವಾಗಿ ಹೋಯಿತು

*  *  *  *

ಇದರಿಂದ ರಾಜುಗೆ ಬಹಳ ವ್ಯಥೆಯಾಯಿತು  ಅವನಿಗೆ ತನ್ನನ್ನು ಆಕೆ ಮದುವೆಯಾಗಲಿಲ್ಲವೆಂದು ದುಃಖವಲ್ಲ  ಒಳ್ಳೆಯ ಮನೆತನಕ್ಕೆ ಅವಳು ಸೇರಲಿಲ್ಲ

ವೆಂಬುದೊಂದೇ ಸಮಾಧಾನ ಸೀತಾಲಕ್ಷ್ಮಿಗೆ ಇದ್ದವರೂ ಶತ್ರುವಾಗಿ ಅವಳ ಜೀವ ಹೋಲಿಯೊಡನೆ ಸಂಸಾರ ರಥ ಸಾಗಿಸಲು ಯಾವ ಹೆಂಗಸಿಗೂ ಸಾಧ್ಯ ವಿಲ್ಲ ಪರಮಾವಧಿ ತಾಳ್ಮೆ ವಹಿಸಿದರೂ ಕಷ್ಟ ಆತ ಮನೆಗೆ ಬಂದು ಒಂದಿಷ್ಟು ತಿಂದು, ಹೆಂಡತಿಯ ಮೇಲೆ ಗುಡುಗಿ, ಬೈಗಳ ಮಳೆಸುರಿಸಿ, ಮನೆ ಬಿಟ್ಟರೆ ಮಧ್ಯರಾತ್ರಿಗೆ ಮರಳಿ ಮನೆಗೆ ಸೇರುತಿದ್ದ ಮನೆಯಲ್ಲಿ ಸಂತೋಷದ ಚಿಹ್ನೆಯೇ ಇರಲಿಲ್ಲ ಗಂಡನಿಂದ ದೈಹಿಕವಾಗಲೀ ಮಾನಸಿಕವಾಗಲೀ—ಯಾವುದೂ ಸುಖ ವಿಲ್ಲ ಅಂತಹ ಬೇಸರದ ವಾತಾವರಣದಲ್ಲಿ ಅವಳು ಹೇಗೆ ಕಾಲ ತಳ್ಳುತ್ತಾಳೆ? ತವರುಮನೆಗೆ ಹೋದರೆ ಅಲ್ಲಿ ತಿಂಗಳು, ಎರಡು ತಿಂಗಳವರೆಗೆ ಇದ್ದು ಬಿಡುತ್ತಿ ದ್ದಳು ಗಂಡನ ಮನೆಯಲ್ಲಿ ಯಾವ ಭಾಗ್ಯ ಕಾದಿದೆ ಅವಳಿಗೆ? ಹೀಗೆ ಅವಳು ತವರುಮನೆಗೆ ಬಂದಾಗಲೆಲ್ಲ ರಾಜು ಆಗಾಗ ಅವಳನ್ನು ಕಂಡು ಮಾತನಾಡು ತ್ತಿದ್ದ ಮದುವೆಯಾದವಳು ಬೇರೆ ಗಂಡಸಿನೊಡನೆ ಹರಟುತ್ತ ಕುಳ್ಳಿರುವುದು ಚೆನ್ನಾಗಿಲ್ಲವೆಂದು ಆಕೆಯ ತಾಯಿ ಗದರಿಸಿದಳು ಅದಕ್ಕೆ ಸೀತಾಲಕ್ಷ್ಮಿ 'ಮದುವೆಯಾದರೆ ನಮ್ಮ ಬಾಯಿಗೆ ಯಾರೂ ಬೀಗ ಹಾಕಿಲ್ಲವಷ್ಟೆ ಮೇಲಾಗಿ ಬೇರೆ ಗಂಡಸಿನೊಡನೆ ನಾನು ಮಾತಾಡುತ್ತಿಲ್ಲ ರಾಜು ಬಾಲ್ಯದ ಗೆಳೆಯ ಆತನೊಡನೆ ಮಾತು ನಿಲ್ಲಿಸುವುದು ಸಾಧ್ಯವಿಲ್ಲ'ವೆಂದಳು ರಾಜುಗೆ—ತಮ್ಮ ಮನೆಗೇ ಕಾಲಿಡಕೂಡದೆಂದು ಭಾಗೀರಥಿಯಮ್ಮನವರ ಆಜ್ಞೆಯಾಯಿತು ಅಂದಿನಿಂದ ರಾಜು ಮತ್ತು ಸೀತಾಲಕ್ಷ್ಮಿ ಊರ ಹೊರಗೆಲ್ಲಿಯಾದರೂ ಜನರ ಕಣ್ಣಿಗೆ ಬೀಳದೆ ಅನಿಯಮಿತ ವೇಳೆಯ ವರೆಗೆ ಹರಟೆಯಲ್ಲಿ ಕಾಲ ಕಳೆಯು- ತಿದ್ದರು

ಒಂದು ದಿನ ಊರಹೊರಗಿನ ಮಾವಿನತೋಪಿನಲ್ಲಿ, ಇವರೀರ್ವರೂ ಮಾತನಾಡುತ್ತಿದ್ದಾಗ, ವಾಸು ಅದೇ ದಾರಿಯಲ್ಲಿ ಸೈಕಲ್‌ಸವಾರನಾಗಿ ಬರುತ್ತಿ ದ್ದನು ದೂರದ ಆ ತೋಪಿನಲ್ಲಿಯ ಎರಡುವ್ಯಕ್ತಿಗಳ ದೃಶ್ಯ ಆತನಿಗೆ ಮುಸಕು ಮುಸಕಾಗಿ ಕಂಡುಬಂದಿತು ಮಾವನಮನೆಗೆ ಹೋಗಿ ನೋಡಿದಾಗ ಅಲ್ಲಿ ಹೆಂಡತಿ ಇರಲಿಲ್ಲ ಆಗ ಸೀತಾಲಕ್ಷ್ಮಿಯುಟ್ಟಿದ್ದ ಸೀರೆಯ ನೆನಹು ಬಂದೊಡ ನೆಯೇ— ಓಹೋ, ಮಾವಿನತೋಪಿನಲ್ಲಿ ಕಾಣಿಸಿಕೊಂಡ ಬಜಾರಿ ಇವಳೇ ಸರಿ ಯೆಂದು ತರ್ಕಿಸಿಬಿಟ್ಟನು ಆಗ ವಾಸು ಇದ್ದವನು ರೇಗಿ ವಾಸುಕಿಯಾಗಿಬಿಟ್ಟನು ಗಂಡು—ಹೆಣ್ಣಿನ ಸಮಸ್ಯೆ ಎಷ್ಟು ಜಟಿಲ! ಹೆಣ್ಣಿನಮೇಲೆ ಒಂದು ಸಲ ಸಂಶ- ಯದ ಮುಚ್ಚಳ ಡಬ್ಬುಹಾಕಿಬಿಟ್ಟರೆ, ಅದನ್ನು ಹೊರಗೆ ತೆಗೆಯುವುದೇ ಕಷ್ಟ

ಗಂಡಸಿಗೆ– ಕಾರಣ ಆಕೆಯ ಹೃದಯವನ್ನು ಪರೀಕ್ಷಿಸಿದವರು ಈ ಜಗತ್ತಿನಲ್ಲಿ ವಿರಳ !

ಸ್ವಲ್ಪ ಹೊತ್ತಿನಮೇಲೆ ಸೀತಾಲಕ್ಷ್ಮಿ ಮನೆಗೆ ಬಂದಳು ವಾಸು ಆಕೆಯೊಡನೆ ಮಾತನಾಡಲೇ ಇಲ್ಲ ಮನೆಗೆ ಕರೆದುಕೊಂಡು ಹೋಗಿ ಈಕೆಗೆ ಚೆನ್ನಾಗಿ ಒದೆಕೊಡಬೇಕೆಂದು ಮನಸ್ಸಿನಲ್ಲಿಯೇ ಯೋಚಿಸಿಕೊಂಡ ತವರು ಮನೆಗೆ ಬಂದು ತಿಂಗಳೆರಡಾಗುತ್ತ ಬಂತು, ಮನೆಗೆ ಹೋಗೋಣವೆಂದು ಆತ ಹೇಳಿದರೆ, ಸೀತಾಲಕ್ಷ್ಮಿ ಒಲ್ಲೆನೆಂದಳು ಎಲ್ಲರಿಗೂ ಆಶ್ಚರ್ಯ ಮಾವನ ಮನೆಗೆ ಬಂದು, ಹೆಂಡತಿಯೊಡನೆ ಊರಿಗೆ ಹೋಗೋಣವೆಂದಾಗ ಗಂಡನ ಮಾತನ್ನು ತಿರಸ್ಕರಿಸುವ ಎವೆ ಹೆಣ್ಣಿಗಿದ್ದರೆ, ಗಂಡನ ತೇಜೋವಧೆಯಾಗಲಿಕ್ಕೆ ಹೆಚ್ಚಿಗೆ ಇನ್ನೇನುಬೇಕು ?

'ನೀನೇಕೆ ಬರುವುದಿಲ್ಲ ? '

'ನನಗೆ ನಿಮ್ಮೊಡನೆ ಬಾಳ್ವೆ ನಡೆಯಿಸಲಿಕ್ಕೆ ಎಂದಿಗೂ ಮನಸ್ಸಿಲ್ಲ

'ಒಹೋಹೋ ! ಇದೊಂದು ಹೊಸ ಮಾತು– ಈಗಿನಕಾಲದ ಪತಿವ್ರತಾಧರ್ಮದ ಪ್ರತೀಕವಾಗಿರುವ ನಾಗರಿಕ ತರುಣಿಯ ಸಾತೀವೃತ್ಯ ಶಬ್ದಕೋಶದಲ್ಲಿಯ ಹೊಸ ಪದ !

'ಅರಸಿಕರಾದ ನಿಮ್ಮಂತಹ ಗಂಡಂದಿರೊಡನೆ ಸಂಸಾರ ನಿರ್ವಹಿಸಲಿಕ್ಕೆ ನಾವು ಪೇಟೆಯಲ್ಲಿ ಅಗ್ಗಕ್ಕೆ ದೊರಕುವ ಪುರಿಗಡಲೆ, ಪುಟಾಣಿಯಲ್ಲ '

'ನೀನು ಹೇಗೆ ಬರುವುದಿಲ್ಲ ನೋಡುತ್ತೇನೆ ನಿನ್ನ ಮಿಂ .. ನು ಕಿವಿಯಲ್ಲಿ ಹೊಸಮಂತ್ರ ಊದಿದ್ದಾನೆಂದು ತೋರುತ್ತದೆ. ಅದಕ್ಕೋಸ್ಕರ ಇಷ್ಟು ಸೊಕ್ಕು '

*   *   *   *

ವಾಸುಗೆ ಸುಮ್ಮನಿರುವುದು ಅಸಾಧ್ಯವೆನಿಸಿತು ಹೆಂಡತಿಯ ಸ್ನೇಹಿತ ರಾಜುವೆಂದು ಅತ್ತೆಯಿಂದ ಆತ ತಿಳಿದಿದ್ದ, ಆದುದರಿಂದ ನೇರವಾಗಿ ರಾಜುವಿನ ಮನೆಗೆ ಹೊರಟ ಈತ ಸೀತಾಲಕ್ಷ್ಮಿಯ ಗಂಡನೆಂದು ರಾಜುಗೆ ತಿಳಿದಿದ್ದರೂ, ಎಂದೂ ಅವನಿರುವಲ್ಲಿಗೆ ಬಾರದ ವಾಸುವು ಆ ದಿನಮಾತ್ರ ತನ್ನೊಡನೆ ಏನೂ ಕೆಲಸವಿಲ್ಲದೆ ಸುಮ್ಮನೆ ಬಂದುದನ್ನು ನೋಡಿ, ಆತನಿಗೆ ಆಶ್ಚರ್ಯವಾಯಿತು.

'ಓಹೋ, ವಾಸುದೇವರಾಯರೋ ಬನ್ನಿ ಬನ್ನಿ! ಬಹಳ ಅಪರೂಪ!' ಎಂದು ರಾಜು ಆತನಿಗೆ ಉಚಿತಾಸನವನ್ನು ಕೊಟ್ಟನು 'ಬಂದ ಕಾರಣವೇನು?' ಎಂದು ಕೇಳಿದನು

ವಾಸು, ಕಾರಣವಿಲ್ಲದೆ ಬರುತ್ತೇನೆಯೇ? ಅಲ್ಲವಯ್ಯಾ, ನನ್ನ ಹೆಂಡತಿಗೇನು ಕಿವಿಮಂತ್ರ ಊದಿ, ಅವಳತಲ ಕೆಡಿಸಿದೆ? ಗಂಡನಮನೆಗೆ ಹೋಗಬೇಡವೆಂದು ಉಪದೇಶಾಮೃತ ಊದಿದೆಯಲ್ಲವೇ? ಬೇರೆಯವರು ಕೆಟ್ಟರೆ ನಿನಗೇನು? ನಿನ್ನ ಹೋಳಿಗೆ ತುಪ್ಪದಲ್ಲಿ ಜಾರಿದರೆ ಸರಿ' ಎಂದನು

ಆಗ ರಾಜುವು 'ನನಗಿದೊಂದೂ ಅರ್ಥವಾಗುವುದಿಲ್ಲ ನಿನ್ನ ಹೆಂಡತಿಗೂ ನನಗೂ ಸಂಬಂಧವೇನು? ನಾನೇನೆಂದು ಅವಳಿಗೆ ಉಪದೇಶಕೊಟ್ಟೆ? ನಿನ್ನ ಹೆಂಡತಿಯನ್ನು ನೀನು ಕರೆದುಕೊಂಡು ಹೋಗುವುದರಲ್ಲಿ ನನ್ನದೇನು ಆತಂಕ? ಎಂದು ಕೇಳಿದನು

'ಪಾಪ! ಏನೂ ಅರಿಯದವ! ಎಷ್ಟು ಜಾಣ್ಮೆಯಿಂದ ಮಾತನಾಡುತ್ತೀ! ಆ ಮಾವಿನತೋಪಿನಲ್ಲಿ ಅವಳೊಡನೆ ಇರುವಾಗ ಅಲ್ಲಿ ಏನೇನು ಮಾತನಾಡಿದ್ದೀ ಹೇಳು ಅದೇ ಕಿವಿಮಂತ್ರದಿಂದಲೇ ಉತ್ತೇಜಿತಳಾಗಿ, ಮರುದಿನ ನನ್ನೊಡನೆ ಬಾಳ್ವೆ ನಡೆಯಿಸಲಿಕ್ಕೆ ಇಷ್ಟವಿಲ್ಲವೆಂದಳು ಇದಕ್ಕೆ ಯಾರು ಹೊಣೆ?' ಎಂದು ಕೇಳಿದನು ವಾಸು

'ಮತ್ತೆ ಏನೇನು ಹೇಳಿದಳು?'

'ನಾನು ರಸಿಕನಲ್ಲವಂತೆ, ಅವಳು ಕತೆಕಾದಂಬರಿ ಓದುವವಳು ನನಗೋ– ನನ್ನ ರುಜು ಸರಿಯಾಗಿ ಹಾಕುವುದು ಹೇಗೆಂದು ತಿಳಿಯದು ಅಂದ ಮಾತ್ರಕ್ಕೆ ಹಗಲಿರುಳೂ ಕಷ್ಟಪಟ್ಟು ದುಡಿಯುವವರು ನಾವು– ಗಂಡಸರು ಈ ಅಮ್ಮಣ್ಣಿಗಳಿಗೆ ಸುಮ್ಮನೆ ತಂದು ಹಾಕಿದುದನ್ನು ಅಡಿಗೆಮಾಡಿ, ಉಂಡುಟ್ಟು ತಮ್ಮ ಪಾಡಿಗೆ ತಾವಿರುವುದು ಬಿಟ್ಟು, ಒಟ್ಟಿಗೆ ಗಂಡಂದಿರು ರಸಿಕರಾಗಬೇಕಂತೆ, ವಿದ್ಯಾವಂತರಾಗಬೇಕಂತೆ, ಇವರ ತಾಳಕ್ಕೆ ಕುಣಿಯಬೇಕಂತೆ! ಇವೆಲ್ಲಾ ಹಾಳು ಉಸಾಬರಿ, ಅಧಿಕಪ್ರಸಂಗವೇಕೆ?'

'ಮುಖ್ಯ ಅವರವರ ಮನಸ್ಸೇ ಕಾರಣ, ಈಗಿನ ಹೆಣ್ಣುಮಕ್ಕಳು ಮೊದಲಿನಂತಲ್ಲ ಬಹಳ ಸುಧಾರಿಸಿದವರು ಸೀತಾಲಕ್ಷ್ಮಿಯ ಮನಸ್ಸು ಹೇಗಿದೆಯೆಂದು ಯಾರು ಬಲ್ಲರು? ನೀನೇ ಹೇಳು, ನಿನ್ನ ಮನಸ್ಸು ಹೇಗಿದೆಯೆಂದು ನಿನಗೆ ಗೊತ್ತೇ?'

'ಮನಸ್ಸೇನು, ಅವಳಿಗೆ ಮಣ್ಣು ತಿನ್ನುವ ಮನಸ್ಸು ದಿನವೂ ನಾಲ್ಕು ಏಟು ಬೆನ್ನಿಗೆ ಬಿಗಿದರೆ ಅವಳು ಹದಕ್ಕೆ ಬರುತ್ತಾಳೆ'

'ಬೇಡ, ಹಾಗೆ ಮಾತ್ರ ಮಾಡಬೇಡ ಈ ದಿನ ನಾನು ನಿನ್ನ ಮಾವನ ಮನೆಗೆ ಬರುತ್ತೇನೆ ಅವಳನ್ನು ಸಮಾಧಾನಮಾಡಲಿಕ್ಕೆ ಆಗುತ್ತದೆಯೇ ನೋಡುತ್ತೇನೆ '

ಹಾಗಾದರೆ ಬರುತ್ತೇನೆ ಪ್ರೀತಿ ವಿಶ್ವಾಸಗಳು ಏಕ ರೀತಿಯಲ್ಲಿರಲಿ ದುಡುಕಿ ಅವಿವೇಕದಿಂದ ನಾನಾಡಿದ ಮಾತುಗಳಿಗಾಗಿ ನನ್ನನ್ನು ಕ್ಷಮಿಸು

* * * *

ವಾಸು ಮಾವನ ಮನೆಗೆ ಹಿಂದಿರುಗಿದನು ಅದೇ ದಿವಸ ಸಂಜೆ ಆರು ಘಂಟೆಗೆ ರಾಜು ಗೋವಿಂದರಾಯರ ಮನೆಗೆ ಹೋದನು ಹತ್ತಾರು ಜನ ಮಹಾನುಭಾವರು ಅಲ್ಲಿ ನೆರೆದಿದ್ದರು ರಾಜು ಸೀತಾಲಕ್ಷ್ಮಿಯನ್ನು ತನ್ನ ಬಳಿಗೆ ಕರೆದು, 'ಸೀತಾ ನಾನೂ ನೀನೂ ಅಣ್ಣತಂಗಿಯಂತೆ ಇಂದಿನ ವರೆಗೆ ವರ್ತಿಸಿದ್ದೆವು ನಮ್ಮ ವಿಷಯದಲ್ಲಿ ಜನರು ಏನೇನೋ ಆಡಿಕೊಳ್ಳುತ್ತಿದ್ದಾರೆ ಈಗ ನೀನು ಗಂಡನ ಮನೆಗೆ ಹೋಗುವುದಿಲ್ಲವೆಂದುದಕ್ಕೆ ನಿನ್ನ ಗಂಡ ನನ್ನನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದಾನೆ ವಿವಾಹಿತಳಾದ ನೀನು ಎಲ್ಲರನ್ನೂ ಸಂಶಯ ಪ್ರವಾಹದಲ್ಲಿ ತೇಲಿಸುವುದು ಸರಿಯಲ್ಲ ಈಗ ಏನು ಹೇಳುವೆ ? ಅಣ್ಣನಂತೆ ನಾನು ನಿನಗೆರಡು ಬುದ್ಧಿಯ ಮಾತುಗಳನ್ನು ಹೇಳುತ್ತೇನೆ ನೀನೀಗ ಗಂಡನ ಮನೆಗೆ ಹೋಗು, ಸಮಾಧಾನದಿಂದ ಇದ್ದು ಆತನೊಡನೆ ಬಾಳ್ವೆಯ ದೋಣಿ ಸಾಗಿಸು– ಎಂದನು ಆದಕ್ಕೆ ಸೀತಾಲಕ್ಷ್ಮಿ ಎಲ್ಲರ ಎದುರಿನಲ್ಲಿ– ಗಂಡಸರು ಉಪದೇಶ ಕೊಡುವುದರಲ್ಲಿ ವಿಶೇಷ ಪ್ರವೀಣರು ಕಷ್ಟ ಪಡುವವರು ಕೊನೆಗೆ ನಾವೇ ಹೆಣ್ಣಿನ ಬಾಳಿನುದ್ದಕ್ಕೂ ಕಣ್ಣೀರೆ ! ನನಗೆ ಹಿತವಲ್ಲದ ಸೇರದ ಗುಣವುಳ್ಳವನೊಡನೆ ನನ್ನ ಮದುವೆಯಾಗಿದೆ ನಾನಿದನ್ನು ಮದುವೆಯೆಂದು ಎಂದಿಗೂ ಒಪ್ಪಲಾರೆ. ದೈಹಿಕವಾದರೂ, ಮಾನಸಿಕವಾಗಿಯಂತೂ ನನಗೆ ಮದುವೆಯಾಗಿದೆಯೆಂದು ನಾನು ಭಾವಿಸಿಯೇ ಇಲ್ಲ ರಸಿಕನಲ್ಲದ, ಪೋಲಿ ಗಂಡನೊಡನೆ ನಾನು ಬಾಳ್ವೆ ನಡೆಯಿಸುವುದು ಸಾಧ್ಯವೇ ಇಲ್ಲ ನನಗೆ ಮುಂದೆ ಎಷ್ಟೇ ಕಷ್ಟಗಳು ಒದಗಲಿ, ನಾನು ಗಂಡನ ಮನೆಗೆ ಎಂದಿಗೂ ಹೋಗಲಾರೆ, ಮನಸ್ಸಿನಲ್ಲಿಯೇ ಭಾವಿಸುವುದಿದ್ದರೆ, ಈಗಿನ ಸಾಮಾಜಿಕ ನ್ಯಾಯದಂತೆ ನನಗೆ

ಈ ಮೊದಲೇ ಗಂಡನೊಡನೆ ವಿವಾಹ ವಿಚ್ಛೇದವಾಗಿದೆ ಜೀವನದ ಘಟವು ಸ್ಫೋಟವಾದ ಮೇಲೆ ಉಳಿದುದೇನು? ಮೊದಲೇ ನಾನು ಇಚ್ಛಿಸಿದಂತೆ ರಾಜುವೇ ನನ್ನ ನಿಜವಾದ ಗಂಡ'- ಎಂದು ಬಿಟ್ಟಳು ಮುಂದೇನು ಉಳಿಯಿತು? ವಾಸು ತಲೆ ತಗ್ಗಿಸಿಕೊಂಡು ಪೆಚ್ಚುಮೋರೆಯಿಂದ ಮನೆಯ ದಾರಿ ಹಿಡಿದನು ಗೋವಿಂದರಾಯರು ಮತ್ತು ಅವರ ಪತ್ನಿ ತಲೆಗೆ ಕೈ ಕೊಟ್ಟರು

ವೀರ ಸನಾತನಿಗಳಿಗೆ ಇಂತಹ ವಿಚಾರವೊಂದು ಕ್ರಾಂತಿಯ ಗಾಳಿಯಾಗಿ ಬೀಸಿತು ನಮ್ಮ ದೇಶದ ಹೆಂಗಸರು ಗಂಡಸರನ್ನು ಮಾರಿಬಿಡುವ ಕಾಲ ಬರಬಹುದೆಂದು ಕಳವಳಗೊಂಡರು ಹೆಂಗಸರ ಕಾಲ ಅವರ ಪ್ರಮೀಳಾ ರಾಜ್ಯದ ಪ್ರಜೆಗಳಿಗಾಗಿ, ಅವರ ಮರ್ಜಿ ಕಾಯುಕೊಂಡು, ಅವರನ್ನಕ್ಕೆ ಕೈಯೊಡ್ಡುವ ಕಾಲ ಬಂದರೇನು ಗತಿ" ಎಂಮು ಹಣೆ ಹಣೆ ಬಡಿದುಕೊಂಡರು ಧಾರ್ಮಿಕ ಜೀವನ, ಸ್ವೈರವೃತ್ತಿಯ ತೆರೆ ಬಿತ್ತು, ನೈತಿಕ ಜೀವನದ ಉತ್ಸವ ಮೂರ್ತಿಗೆ ಮೇಲೆ ಚಪ್ಪಡಿಕಲ್ಲು ಬಿತ್ತು! ಕಾಲಾಯ ತಸ್ಮೈ ನಮಃ!

ವಾಸುವನ್ನು ಬಿಟ್ಟು ರಾಜುವನ್ನು ಸೇರಿದಳು ಸೀತಾಲಕ್ಷ್ಮಿ ಅವಳಾಗಿ ಅವನನ್ನು ಸೇರಿದಳು ಆ ಲಕ್ಷ್ಮಿಯನ್ನು ಭಾಗ್ಯಲಕ್ಷ್ಮಿಯನ್ನು ಅಪ್ಪುಗೈಯಿಂದ ಬಾಚಿ ತಬ್ಬಿಕೊಳ್ಳದೆ ಹೊರಕ್ಕೆ ದಬ್ಬಲು ಸಾಧ್ಯವೇ? ಅವನಿಗೆಂದಾದರೂ ಅಂತಹ ಮನಸ್ಸು ಬಂದೀತೇ? ಮೊದಲೇ ಜಾತ್ಯತೀತ ರಾಷ್ಟ್ರ, ಆದರಲ್ಲಿ ಹೆಂಗಸರಿಗೆ ಸಮಾನ ಸ್ವಾತಂತ್ರ್ಯ ಆ ಮೇಲೆ ಹಿಂದೂ ಶಾಸ್ತ್ರ ಕ್ರೋಢೀಕರಣ ಮುಸೂದೆ ವರ್ಣ ಸಂಕರ ಬಹಳ ಸುಲಭದಲ್ಲಿ ಆಗಿಬಿಡುತ್ತದೆ ನೆಹ್ರು-ಲಿಯಾಖತ್ ಒಪ್ಪಂದಕ್ಕಿಂತ ದೊಡ್ಡ ಒಪ್ಪಂದ ನಮ್ಮ ಗಂಡಸರು-ಹೆಂಗಸರಲ್ಲಿ ನಡೆಯುವ ಕಾಲ ಸಂಭವಿಸುವುದೋ ಏನೋ-ಯಾರಿಗೆ ಗೊತ್ತು?

'ನಾವೆಲ್ಲರೂ ಒಂದೇ'- ಈಗ ಅದನ್ನು ಹೇಳಬಹುದು ಕಾರಣ ನಾವೆಲ್ಲರೂ ಒಂದೇ ಡೋಣಿಯಲ್ಲಿ ಪ್ರಯಾಣ ಮಾಡುವವರು ಗುರಿ ಸಿಗದಿದ್ದರೆ ಮಾತ್ರ ಕಷ್ಟ ಜಲಸಮಾಧಿ ಹೊಂದಿದರೇನ ಗತಿ?

---

# ಬಾಳುವೆವು ನಾವು

ವಾಡಿಕೆಯಂತೆ ಪ್ರತೀ ವರ ಷ ನಡೆಯಲಿದ್ದ ವಾರ್ಷಿಕ ಪರೀಕ್ಷೆ ಸಮೀಪಿಸಿತು ಗೋಪಿನಾಥನು ಪರೀಕ್ಷೆ ಮುಗಿಯೊಡನೆಯೇ ಊರಿಗೆ ಹೊರಡಲಿಕ್ಕಿದ್ದನು ಕೊಲ್ಲಾಪುರದಲ್ಲಿಯ ರಾಜಾರಾಮ ಕಾಲೇಜ್‌ನಲ್ಲಿ ಆತನು ಓದುತಿದ್ದು, ಆ ವರ್ಷ ಬಿ ಎ ತರಗತಿಯಲ್ಲಿದ್ದನು ಅವನು ಕನ್ನಡಿಗ ಮಲೆನಾಡಿನ ಮೂಲೆಯಿಂದ ಅಲ್ಲಿಗೆ ಓದಲು ಹೋದವನು ಅಲ್ಲಿಯ ಜನರಿಗೆ ಮಲೆನಾಡೆಂದರೆ ತುಂಬಾ ಹೊಸದು ಕರ್ನಾಟಕವೆಂದರೆ ಒಂದು ವೇಳೆ ಅರ್ಥವಾದೀತೋ ಏನೋ! ಅದೇ ಕರ್ನಾಟಕದ ಒಂದು ಭಾಗವಾದ ಮಲೆನಾಡಿನಿಂದ ಹೋದ ಗೋಪಿನಾಥನಾದರೋ ತಂಪು ಹವೆಯಲ್ಲಿದ್ದವನಾದ ಕಾರಣ ಬಹಳ ಚುರು-ಕಾಗಿದ್ದನು ಕೊಲ್ಲಾಪುರಕ್ಕೆ ಹೋದ ಒಂದೆರಡು ತಿಂಗಳುಗಳಲ್ಲಿಯೇ ಹತ್ತಾರು ಮಂದಿ ಗೆಳೆಯರನ್ನು ದೊರಕಿಸಿಕೊಂಡನು ಕನ್ನಡಿಗರೂ ಮರಾಠಿಗರೂ ಏಕಸಮವಾಗಿ ಆತನ ಮಧುರ ಸ್ನೇಹಕ್ಕೆ ಪಾತ್ರರಾದರು

ಆತನ ಕಾಲೇಜ್ ಅಭ್ಯಾಸವು ನಿರಾತಂಕವಾಗಿ ಸಾಗುತ್ತಿತ್ತು ಜೊತೆಗೆ ಅಲ್ಲಿಯ ಜನರ ರೀತಿ-ನೀತಿ ನಡೆ-ನುಡಿ, ಆಹಾರ ವ್ಯವಹಾರ ಮುಂತಾದವುಗಳೆಲ್ಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸುತಿದ್ದನು ಆತನದು ಶಾಂತ ಗುಣ, ಸರಳ ಸ್ವಭಾವ, ಯಾರ ಗೊಡವೆಗೂ ಹೋಗದೆ, ತನ್ನ ಕೊರಡಿಯಲ್ಲಿ ತಾನಿದ್ದುಕೊಂಡು, ವೇಳೆಗೆ ಸರಿಯಾಗಿ ಕಾಲೇಜಿಗೆ ಹೋಗಿಬಂದು, ಇನ್ನುಳಿದ ವೇಳೆಯಲ್ಲಿ ಕರವೀರದ ಮಾರ್ಗದಲ್ಲಿಯೋ, ಶಹಾಪುರಿ ದಾರಿಯಲ್ಲಿಯೋ ವಾಯುಸಂಚಾರಕ್ಕೆ ಹೊರಡುತ್ತಿದ್ದನು ಆ ಊರಿನ ಪ್ರಕೃತಿ ಸೌಂದರ್ಯವೇನೋ ಮನಮೋಹಕವಿದೆ ಮುಖ್ಯ ರಾಜ ಬೀದಿಗೆ 'ವಿಲ್ಸನ್ ರೋಡ್' ಎಂದು ಹೆಸರಿದ್ದು, ಆ ರಸ್ತೆಯಿಂದ ಕವಲು ಕವಲಾಗಿ ಹೊರಡುವ ಬೀದಿಗಳಿಗೆ ಶಹಾಪುರಿ, ರಾಜಾರಾಮಪುರಿ, ಲಕ್ಷ್ಮೀಪುರಿ ಮುಂತಾಗಿ ಹೆಸರಿಟ್ಟಿದ್ದಾರೆ ಇವೆಲ್ಲಾ ಮುಖ್ಯ ಮುಖ್ಯ ರಸ್ತೆಗಳು ಇನ್ನು ಚಿಕ್ಕ ಚಿಕ್ಕ ಗಲ್ಲಿಗಳಿಗೆ ಪಹಿಲಾಗಲ್ಲಿ, ದುಸರಾಗಲ್ಲಿ, ತಿಸರಾಗಲ್ಲಿ ಹೀಗೆ ಕರೆಯುತ್ತಾರೆ ನಾವು ರೈಲ್ವೆ ನಿಲ್ದಾಣದಲ್ಲಿಳಿದಾಗ ಮೊದಲು ಶಹಾಪುರಿ, ಆ ಮೇಲೆ ರಾಜಾರಾಮಪುರಿ, ನಂತರ ಲಕ್ಷ್ಮೀ-

ಪುರಿ ಕಣ್ಣಿಗೆ ಬೀಳುತ್ತವೆ ಸರಕಾರದ ಉನ್ನತ ಅಧಿಕಾರಿಗಳು ಹೆಚ್ಚಾಗಿ ರಾಜಾರಾಮಪುರಿಯಲ್ಲಿ ವಾಸಿಸುವರು ರಾಜಾರಾಮ ಕಾಲೇಜ್ ಈ ವಿಲ್ಸನ್ ರೋಡ್‌ನಲ್ಲಿ– ಜುನಿಯಾ ರಾಜವಾಡದಲ್ಲಿರುವದು ಈ ಜುನಿಯಾ ರಾಜವಾಡೆ ಯಲ್ಲೇ ಅಂಬಾಬಾಯಿಯ ಗುಡಿ ಇದೆ ಅಲ್ಲಿಂದ ಮುಂದೆ ಕರವೀರ ಪೇಟೆ ಸಾಧಾರಣ ಒಂದು–ಒಂದೂವರೆ ಮೈಲ್ ದಾಟಿದೊಡನೆಯೇ ಬಟ್ಟಬಯಲುಗಳ ಸುಂದರ ದೃಶ್ಯ ಕಣ್ಣಿಗೆ ಕಾಣುವುದು ಪನ್ಹಾಲಗಡ, ವಿಶಾಲಗಡ ಕೋಟೆಗಳು, ಶಾಲಿನೀನಿವಾಸ ಸ್ಟುಡಿಯೋ, ಶಾಲಿನಿನಿವಾಸ ಅರಮನೆ ರಂಕಾಲಾ ಕೆರೆ, ಪಂಚಗಂಗಾನದಿ, ಅಂಬಾಬಾಯಿ ಗುಡಿ, ರಾಜಾರಾಮ ಕಾಲೇಜ್ ಇವೇ ಮೊದಲಾದವು ನೋಡತಕ್ಕ ಪ್ರೇಕ್ಷಣೀಯ ನೋಟಗಳು ಅಂತೂ ಇದು ನಿಸರ್ಗದ ಶಾಂತಿಯ ಮಡಿಲಲ್ಲಿರುವ ಊರು ಜನರೂ ಜಾತಿ–ಮತ ಭೇದ ವಿಲ್ಲದೆ ಒಂದಾಗಿ ಬಾಳುತ್ತಿದ್ದಾರೆ ಇಂತಹ ಪುಣ್ಯ ಸ್ಥಳಕ್ಕೆ ಕಾಲೇಜ್ ಶಿಕ್ಷಣ ಪಡೆಯಲು ದೂರ ದೂರದ ಸ್ಥಳಗಳಿಂದ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಬರು ವುದು ಆಶ್ಚರ್ಯವಲ್ಲ

ಗೋಪೀನಾಥನ ಹುಟ್ಟೂರು ಮಲೆನಾಡಿನಲ್ಲಿಯ ಒಂದು ಭಾಗದಲ್ಲಿದೆ ಯೆಂದು ಕೇಳಿದಾಗ ಅಲ್ಲಿಯ ಜನರಿಗೆ ಅದರ ಪ್ರಥಮ ಪರಿಚಯಮಾಡಿಕೊಳ್ಳುವ ಕುತೂಹಲ ಹುಟ್ಟಿತು ಈ ಮೊದಲು 'ತಿಂಗಿನತವರು' ಓದಿ ದಕ್ಷಿಣಕನ್ನಡದ ಅರಿವನ್ನುಂಟು ಮಾಡಿಕೊಂಡಿದ್ದರು ಈಗ ಶಾಂತಿರಸಹೊಮ್ಮುವ ಮಲೆನಾಡಿನ ನಿಕಟಪರಿಚಯ ಬೇಡವೇ ? ಅವರ ದೃಷ್ಟಿಯಿಂದ ಅದೊಂದು ರೋಗರುಜಿನದ ಜೀವನ ಜಂಜಾಟದ ಹಳ್ಳಿಯಕೊಂಪೆ ಆದರೆ ಅದು ಗುಡ್ಡ ಬೆಟ್ಟಗಳ ಸೀಮೆ ಯೆಂದು ಮಾತ್ರ ಅರಿಯರು ಮಲೆನಾಡು ನಿಜಕ್ಕೂ ಕಲೆಯಬೀಡು ಇಲ್ಲಿಯ ನಿಸರ್ಗಸೌಂದರ್ಯವನ್ನು ಯಾವ ಭಾವಕುಂಚದಿಂದ ಚಿತ್ರಿಸಲು ಸಾಧ್ಯ ? ಚಿತ್ರಿಸಿದರೂ ದೈವಸೃಷ್ಟಿಸೌಂದರ್ಯದೆದುರಿಗೆ ಮಾನವನಿರ್ಮಿತ ಕಲಾಚಿತ್ರ ನೈಪುಣ್ಯ ಕೇವಲ ಗೀಚುಗೆರೆಯಲ್ಲವೇ ? ಮಲೆನಾಡೊಂದು ಹರಿದ್ಭೂಮಿ ! ಹಚ್ಚಹಸುರಿನ ತರುಲತಾದಿಗಳಿಂದ ಯಾವಾಗಲೂ ರಮಣೀಯವಾಗಿ ಕಂಗೊಳಿ ಸುವ ಪ್ರದೇಶ ಗೋಪೀನಾಥನು ತನ್ನ ಮಲೆನಾಡಿನ ನೈಜಚಿತ್ರದ ಪರಿಚಯ ವನ್ನು ಅವರೆಲ್ಲರಿಗೆ ಮಾಡಿಕೊಟ್ಟನು ಹಿಮರಹಿತ ಕಾಶ್ಮೀರವೆನಿಸಿದ ತೀರ್ಥ- ಹಳ್ಳಿ ಇತಿಹಾಸಪ್ರಸಿದ್ಧ ನಗರ ಇಕ್ಕೇರಿ ಮತ್ತು ಕೆಳದಿ ವಾಸ್ತುಶಿಲ್ಪವೈಭವ ವನ್ನು ಸಾರುವ ಬೇಲೂರು, ಹಳೆಬೀಡಿನ ದೇವಾಲಯಗಳು ಆಗುಂಬೆ ಘಟ್ಟ,

ಜೋಗದ ಜಲಪಾತ, ಮುಂತಾದವುಗಳಲ್ಲಿ ಅಡಗಿರುವ ರಮಣೀಯತೆಯ ಅರಿವನ್ನು ಮಾಡಿಕೊಟ್ಟನು. ಅಲ್ಲಿಯ ಅಡಿಕೆ ಕೃಷಿಯ ಪ್ರಥಮ ಪರಿಚಯವನ್ನ ವರಿಗೆ ಉಂಟುಮಾಡಿ, ಇನ್ನೊಮ್ಮೆ ರಜೆಯಲ್ಲಿ ಊರಿಗೆ ಹೋದಾಗ ಅವನೂರಿನಲ್ಲಿ ತಯಾರಿಸಿದ ಅಡಿಕೆ, ಏಲಕ್ಕಿ, ಮೆಣಸು ಅವರಿಗೆ ಕಾಣಿಕೆಯಾಗಿ ತಂದು ಕೊಡುವೆನೆಂದು ಆಶ್ವಾಸನೆಯನ್ನಿತ್ತನು.

* * * *

ಹಳ್ಳಿಯ ಹೆಸರನ್ನು ಕೇಳಿದರೆ ಪಟ್ಟಣದ ಜನರಿಗೆ ಹೊಟ್ಟೆನೋವಿಗೆ ಆರಂಭವಾಗಿಬಿಡುವುದುಂಟು. ಆದರೆ ಹಳ್ಳಿಯವರ ಶ್ರಮದ ದುಡಿಮೆಯ ಬಲದಿಂದಲೇ ತಮ್ಮ ಹೊಟ್ಟೆಗೊಂದು ತುತ್ತು ಅನ್ನ ಬೀಳುತ್ತದೆಂದುಮಾತ್ರ ಅರಿಯರು. 'ಕೆಟ್ಟು ಹಳ್ಳಿಸೇರು' ಎಂಬ ಚಳವಳಿಗಾರಂಭವಾಗಬೇಕು. ಈಗಿನ ಹಳ್ಳಿಗರ ಉದ್ಧಾರ ಅಷ್ಟೇನೂ ತೃಪ್ತಿಕರವಾಗಿಲ್ಲ. ಪಟ್ಟಣದ ಜನರು ಇನ್ನೂ ಪಟ್ಟಣದ ವ್ಯಾಮೋಹವನ್ನು ಬಿಡಲೊಲ್ಲರು. ಸುಶಿಕ್ಷಿತ ಯುವಕ ಯುವತಿಯರಿನ್ನೂ ಗ್ರಾಮೋದ್ಧಾರದ ಯೋಜನೆಗಳನ್ನು ಪಟ್ಟಣಗಳಿಂದಲೇ ಸಂದೇಶರೂಪವಾಗಿ ಕಳಿಸುತ್ತಿದ್ದಾರೆ. ಹೆಚ್ಚೆಂದರೆ ಆಕಾಶವಾಣಿ ಭಾಷಣ ಭರ್ಜರಿಯಾಗಿ ಕೊಡುತ್ತಾರೆ. ಕಾರಣ ಅವರ ಮಾತುಗಳೆಲ್ಲ ಆಕಾಶದಲ್ಲೇ ಲೀನವಾಗಿ ಬಿಡಲೆಂದೋ ಏನೋ ! ಆಚಾರದಲ್ಲಿ ಸಾವಕಾಶವಾಣಿಯೇ ಮತ್ತೆ ! ನಮ್ಮ ಭರತಮಾತೆಯ ಗರ್ಭದಲ್ಲಿ ಅಡಗಿರುವ ಏಳುಲಕ್ಷ ಹಳ್ಳಿಗಳ ಪಾಡೂ ಹೀಗಾದರೆ, ಪ್ರಜಾರಾಜ್ಯದಲ್ಲಿ ಅದೆಂತಹ ಉತ್ತಮ ಪ್ರಜೆಯನ್ನು ನಾವು ನಿರೀಕ್ಷಿಸುವುದು ಸಾಧ್ಯ ?

* * * *

ಗೋಪೀನಾಥನು ಲಕ್ಷ್ಮೀಪುರಿಯಲ್ಲಿಯ ಒಂದು ದೊಡ್ಡ ಕಟ್ಟಡದ ಎರಡನೆ ಮಹಡಿಯ ಎಂಟನೆಯ ಕೊರಡಿಯಲ್ಲಿ ವಾಸಿಸುತ್ತಿದ್ದನು. ಪಕ್ಕದ ಕೊರಡಿಯಲ್ಲಿ ವಸಂತ ಮತ್ತು ಶಾಲಿನಿ ಇದ್ದರು. ಆತ ಮತ್ತು ಗೋಪೀನಾಥ ಒಂದೇ ತರಗತಿಯವರು. ಶಾಲಿನಿ ಇಂಟರ ತರಗತಿಯಲ್ಲಿದ್ದಳು. ಅಣ್ಣ-ತಂಗಿ ಶೋಲಾಪುರದವರು. ಅವರೆಲ್ಲರೂ ಬಯಸುವುದು ಸಾಂಸ್ಕೃತಿಕ ಐಕ್ಯದಿಂದಾಗಿ ಒಂದು ಮಧುರ ಮಿಲನ ! ಈ ಐಕ್ಯತೆಯನ್ನು ಸಾಧಿಸದೆ, ವಿಶ್ವಬಾಂಧವ್ಯದ ಮಂತ್ರವನ್ನು ಜಪಿಸಿದರೆ ಜಲಲಿಪಿಯೇ ಸರಿಯೆಂದು ಆ ಅಣ್ಣ ತಂಗಿಯರ ವಾದ. ಸಾಂಸ್ಕೃತಿಕ ಐಕ್ಯದ ಹೆಸರಿನಲ್ಲಿ ನಾವೆಲ್ಲರೂ ಒಂದಾಗುವುದಿದ್ದರೆ ಆ ಸುಯೋಗವನ್ನು ಅಲ್ಲಗಳೆ

ಯುವವರಾರು ? ಆದರೆ ಇದು ಆಡಿದಷ್ಟು ಸುಲಭವಲ್ಲ ಒಂದು ದೊಡ್ಡ ಕ್ರಾಂತಿಯೇ ನಡೆಯಬೇಕಾದೀತು ಇಷ್ಟರಮೇಲೆ ನಮ್ಮ ಜನರಿಗೆ ಮುಂದಾಳುಗಳ ಮಾತನ್ನು ಕೇಳುವತಾಳ್ಮೆಯೇ ಅವರ ಜಾಯಮಾನದಿಂದ ಬಂದಿರುವುದಿಲ್ಲ ಬೇರೆ ಬೇರೆ ಸಂಸ್ಕೃತಿಗಳ ಸಾಮರಸ್ಯವಾಗದೆ, ಬೇರೆ ಬೇರೆ ಜಾತಿ, ಧರ್ಮಗಳಿಗೆ ಸೇರಿದ ಜನರೆಲ್ಲರೂ ಅಣ್ಣತಮ್ಮಂದಿರಂತೆ ಒಟ್ಟಾಗಿ ಕೂಡದೆ ಸಾಂಸ್ಕೃತಿಕ ಐಕ್ಯವನ್ನು ಸಾಧಿಸುವುದು ಸುಲಭಸಾಧ್ಯವಲ್ಲ ದಿನಕ್ಕೊಂದು ಪಕ್ಷ, ಸಂಗಡವನ್ನು ನಿರ್ಮಿಸಿಕೊಂಡು ಕೋಮುವಾರು ಗಲಭೆಯಂತಹ ಗಲಭೆಯನ್ನು ಹುಟ್ಟಿಸಿ, ದೇಶವನ್ನು ಅಲ್ಲೋಲಕಲ್ಲೋಲ ಮಾಡುವಂತಹ ಚಟುವಟಿಕೆಗಳಿಂದ ಮೆರೆಯುವುದೊಂದು ಪುರುಷಾರ್ಥದ ಕೆಲಸವೆಂದು ತಿಳಿದು, ಶಾಂತಿಪ್ರವಾಹಕ್ಕೆ ಕಲ್ಲೆಸೆದು ಕ್ರಾಂತಿಯ ಅಲೆಗಳನ್ನು ಹುಟ್ಟಿಸುವ ಇಂತಹ ಜನರನ್ನು ಸರಕಾರವು ಗಲ್ಲಿಗೇರಿಸದೆ ಇರುವುದು ಪರಮಅನ್ಯಾಯ !

* * * *

ಈ ಸಾಸಂಸ್ಕೃತಿಕ ಐಕ್ಯದ ಹೆಸರಿನಲ್ಲಿ ಶಾಲಿನಿಗೂ ಗೋಪಿನಾಥನಿಗೂ ಸ್ನೇಹ ಬೆಳೆಯಿತು ಆಕೆ ಅವನ ಊರಾದ ಮಲೆನಾಡನ್ನು ನೋಡಬೇಕೆಂದು ಬಯಸಿದಳು ಪ್ರಕೃತಿಯೊಡನೆ ಹೋರಾಡಿ, ಜೀವನದ ಸಮಸ್ಯೆಗಳನ್ನು ಬಿಡಿಸಿ ಸುಸೂತ್ರವಾಗಿ ಬಾಳುವವರು ನಾವೇ ಸರಿ' ಎಂದು ಅವನು ಹೇಳಿದ ಮಾತನ್ನು ಹುಸಿಯಾಗಿ ಮಾಡಬೇಕೆಂದು ಅವಳ ಛಲ ವಾರ್ಷಿಕ ಪರೀಕ್ಷೆ ಮುಗಿದೊಡನೆಯೇ ಗೋಪಿನಾಥನೊಡನೆ ಹೊರಡಬೇಕೆಂದಿದ್ದಳು ಹೊರಟಳು ಮಲೆನಾಡಿನ ಜನರ ನಡೆನುಡಿ, ಆದರ ಸತ್ಕಾರ, ಅವರ ಬಾಳಿನ ಸಮಸ್ಯೆಗಳನ್ನು ತಿಳಿದುಕೊಳ್ಳಬೇಕೆಂದು ಅವಳ ಆತುರ ಸುಸಂಸ್ಕೃತ ತರುಣಿಯಾದವಳಿಗೆ ಗೋಪಿನಾಥನ ಊರನ್ನು ನೋಡುವ ತವಕ ! ಆತನ ಊರು ಶಹರಿನಿಂದ ನಾಲ್ಕೈದು ಮೈಲುಗಳ ಅಂತರದಲ್ಲಿಯ ಒಂದು ಹಳ್ಳಿ ಒಂದಿಷ್ಟು ದೂರದವರೆಗೆ ಬಸ್‌ನಲ್ಲಿ ಪ್ರಯಾಣ ಮಾಡಿ, ಮುಂದೆ ಇಬ್ಬರೂ ಹಳ್ಳಿಗೆ ಕಾಲುನಡಿಗೆಯಿಂದ ಹೊರಟರು ಗೋಪಿನಾಥ ತಾನೂ ಶಾಲಿನಿಯೂ ಆ ದಿನವೇ ಊರಿಗೆ ಬರುತ್ತೇವೆಂದು ಮೊದಲೇ ತಿಳಿಸಿದ್ದನು ದಾರಿಯಲ್ಲೇ ಅವನ ತಮ್ಮ ಆತ್ಮಾರಾಮ ಅಣ್ಣನನ್ನು ಎದುರುಗೊಂಡನು ಮೂವರೂ ಮನೆಯ ಕಡೆಗೆ ದಾರಿ ಸಾಗಿದರು

* * * *

ಮೃಣ್ಮಯಿಯಾದ ಪ್ರಕೃತಿ ಎಷ್ಟು ಸುಂದರಳೆಂದು ಇಲ್ಲಿ ಈ ಮಲೆನಾಡಿನ ನಿಸರ್ಗ ಚಿತ್ರಗಳನ್ನು ಅವಲೋಕಿಸಿದವರಿಗೆ ತಿಳಿಯುತ್ತದೆ ಆದರೆ ಕಣ್ಣಿಗಾ-ದಷ್ಟು ಆನಂದದ ಪರಮಾವಧಿ ಮುಟ್ಟದಲ್ಲಿ ನಾಲಗೆ ಕುಣಿಯಲಾರದು ಸುತ್ತಲೂ ಭಯಂಕರ ಕಾಡಿನ ನೆರಗು ಮುಂದೊಂದು ಕಲ್ಲು ಪಾವಟಿಗೆಗಳಿದ್ದ ಸ್ಫಟಿಕಮಯವಾದ ತಿಳಿನೀರಿನ ಕೆರೆ ಅಲ್ಲಿಂದ ಮುಂದೆ ಸಾಗಿದರೆ ಪಾರಿಜಾತ, ಸಂಪಗೆ ಹೂಗಳನ್ನು ಬಿಡುವ ಮರಗಳು ಮುಂದೆ ಕದಳೀ ವನ ಆಮೇಲೆ ಅಡಿಕೆಯ ತೋಟಗಳು ಎಲ್ಲವೂ ಶಾಲಿನಿಯನ್ನು ಕೈಯೆತ್ತಿ ಕರೆಯುವಂತೆ ಆಕೆಗೆ ಭಾಸವಾಗುತ್ತಿತ್ತು ಜೈಮಿನಿಭಾರತದ ಹತ್ತೊಂಬತ್ತನೆಯ ಸಂಧಿಯಲ್ಲಿ ಬರೆಯಲಾದ 'ತೆಂಗಳಗವುಂಗು ಪನಸ ದ್ರಾಕ್ಷ ಜಂಬು ನಾರಂಗ ಜಂಬೀರ ಖರ್ಜೂರ ಕಿತ್ತಳೆ ಮಾತುಳಂಗ ತಿಂತ್ರಿಣಿ ಚೂತ ನೆಲ್ಲಿ ಬಿಲ್ವ ಕಪಿತ್ಥ' ಮೆಂಬ ನಾನಾತರಗಳು ಇಲ್ಲಿ ಇದ್ದವೆಂಬುದು ಸುಳ್ಳಲ್ಲ ಶಾಲಿನಿಯು ಅವಳ ಹುಟ್ಟೂರಿನಲ್ಲಿ ಈ ತರುಸಮೂಹವನ್ನೆಲ್ಲಿ ನೋಡಿದ್ದಳು ? ಅವಳೆಲ್ಲಿಯಾದರೂ ಜುನಿಯಾ ರಾಜವಾಡೆಯ ಮಹಾದ್ವಾರದಲ್ಲಿ ಹೂವಿನ ಪೇಟೆಯಲ್ಲಿ ಮುಡಿಯುವದಕ್ಕಾಗಿ ಕೆಲವು ಜಾತಿಯ ಹೂಗಳನ್ನು ಕೊಂಡಿರಬಹುದಷ್ಟೆ ದೀಪಾವಳಿಯ ರಜೆಯಲ್ಲಿ ಅವಳು ಬಂದಿದ್ದರಿಂದ ಮಲೆನಾಡಿನಲ್ಲಿಯ ಅಡಿಕೆ ಸುಗ್ಗಿ ಕೊಯ್ಲು ನೋಡಲು ಅವಳಿಗೆ ಅನುಕೂಲವಾಯಿತು

ಸುತ್ತಲೂ ಕಾಡುಗಳಮಧ್ಯೆ ಅಲ್ಲಲ್ಲಿ ನಾಲ್ಕಾರು ಮನೆಗಳ ಗುಂಪಿಗೊಂ-ದೊಂದು ಹಳ್ಳಿ ಆ ಹಳ್ಳಿಯ ಜನಜೀವನವೆಷ್ಟುಸರಳ ! ಮಾತೆಷ್ಟು ಮಾರ್ದವ'! ಅತಿಥಿಗಳಿಗೆ ತಮ್ಮ ಹೃದಯವನ್ನೇ ಒಪ್ಪಿಸುವ ಅವರ ಸೌಜನ್ಯ ಕೊಂಡಾಡುವಂತಹದು ಯಾವಾಗಲೂ ರೋಗರುಜಿನಗಳಿಂದಸೋತು ಸುಣ್ಣವಾಗಿದ್ದರೂ ಅವರ ಜೀವನದ ಹೋರಾಟವೆಷ್ಟುಪವಿತ್ರ ! ಆ ಅಡಿಕೆಯಕೃಷಿ ಯೆಷ್ಟು ಶ್ರಮಪೂರ್ಣವಾದುದು !

* * * *

ಶಾಲಿನಿ ಮತ್ತು ಗೋಪೀನಾಥ ಮನೆಯೊಳಕ್ಕೆಕಾಲಿಡುತ್ತಲೇ ಆತನ ತಂಗಿ ವಿಶಾಲಾಕ್ಷಿ ಕಾಲುತೊಳೆಯಲು ಎರಡು ಬಿಂದಿಗೆಗಳಲ್ಲಿ ಬಿಸಿನೀರನ್ನು ತಂದಳು. ಕೂಡಲೇ ಬಿಸಿ ಬಿಸಿ ಕಾಫಿಯ ಪಾನನಡೆಯಿತು. ಶಾಲಿನಿ ಕೊಲ್ಲಾಪುರದವಳಾದುದರಿಂದ ಕನ್ನಡ ಮಾತಾಡಲು ತಕ್ಕಮಟ್ಟಿಗೆ ಬರುತಿತ್ತು. ಧಾರವಾಡ ಶಹರಿನಲ್ಲಿ, ಕಾಲೇಜ್‌ನಲ್ಲಿ ಓದುವಹುಡುಗಿಯೆಂದು ಸ್ವಲ್ಪವೂ ಅಹಂಭಾವ

ವಿಲ್ಲವೆ ವಿಶಾಲೆಯೊಡನೆ ಮಾತುಕತೆಗಳಲ್ಲಿ ಬೆರೆತಳು. ಅವಳಣ್ಣನಮನೆ ತನ್ನ ಮನೆಯೆಂದೇ ಭಾವಿಸಿದಳು. ಅಷ್ಟು ಐಕ್ಯತೆಯ ಏಕಸೂತ್ರದಲ್ಲಿ ಪೋಣಿಸಿತ್ತು ಅವರ ಮಧುರ ಸ್ನೇಹ !

ಗೋಪಿನಾಥನು ಶಾಲಿನಿಗೆ ಮಲೆನಾಡಿನಲ್ಲಿಯ ಪ್ರೇಕ್ಷಣೀಯ ಸ್ಥಳ ವಿಶೇಷಗಳನ್ನೆಲ್ಲ ತೋರಿಸಿದನು. ಇಕ್ಕೇರಿಯ ದೇವಸ್ಥಾನದ ಶಿಲ್ಪ ಚಾತುರ್ಯ, ಕೆಳದಿಯ ಗತವೈಭವ, ಕಲಸಿಯ ದೇವಾಲಯದ ಶಿಲ್ಪ ಪ್ರತಿಭೆ, ಗಂಗಾವತರಣ ದಂತೆ ಎತ್ತರದಿಂದ ಕೆಳಗೆ ಧುಮುಕುವ ಜೋಗದ ಜಲಪಾತ, ಕಾಶ್ಮೀರವನ್ನೇ ಹೋಲುವ ತೀರ್ಥಹಳ್ಳಿ, ಚಿಕ್ಕ ಮಗಳೂರಿನ ಕಾಫಿ ತೋಟಗಳು. ಇವುಗಳ ನ್ನೆಲ್ಲ ನೋಡಿ, ಕೇಳಿ ಅವಳು ಹರ್ಷಗಡಲಲ್ಲಿ ತೇಲಿದಳು. ಅವಳಿಗೆ ತನ್ನ ಸ್ವಂತ ಊರಿನ ನೆನಪೇ ಉಳಿಯಲಿಲ್ಲ. ಅಷ್ಟು ದಿನಗಳಲ್ಲಿ ಅವಳ ಮನಸ್ಸು ಎಷ್ಟೋ ವಿಕಾಸ ಹೊಂದಿತು. ಅಲ್ಲಿಯ ತರುಲತಾದಿಗಳೆಲ್ಲ 'ಬಾಳುವವರು ನೀವಲ್ಲ ನಾವು' ಎಂದು ಕರೆಕರೆದು ಕಿವಿಯೂದುವಂತೆ ಭಾಸವಾಯಿತವಳಿಗೆ, ಕಲಾ-ರಾಧಕಳಾದ ಅವಳಿಗೆ ಇಲ್ಲಿಯ ನಿಸರ್ಗರಮ್ಯ ಮನೋಹರ ದೃಶ್ಯಗಳು 'ರಾಧಸ್' ಆಗಿ ಪರಿಣಮಿಸಿದವು. ಅಲ್ಲಿಯ ನಿಸರ್ಗಸೌಂದರ್ಯದೊಡನೆ ಅವಳ ಸೌಂದ-ರ್ಯವೂ ಬೆರೆತರೆ ಹೇಗೆ ? – ಕಲಾಮಿಲನವಾಗುವುದಿಲ್ಲವೇ ?

* * * *

ದೀಪಾವಳಿಯ ರಜೆ ಮುಗಿಯುತ್ತಾ ಬಂದಿತು. ಶಾಲಿನಿ ಮತ್ತು ಗೋಪೀ ನಾಥ ಮರಳಿ ಕೊಲ್ಹಾಪುರಕ್ಕೆ ಹೊರಟರು. ಹೋಗುವಾಗ 'ವಿಶಾಲೀ ನಾನು ಇನ್ನೊಮ್ಮೆ ನಿಮ್ಮಲ್ಲಿಗೆ ಬರುವೆ'ನೆಂದು ವಾತ್ಸಲ್ಯದಿಂದ ಅವಳನ್ನು ಶಾಲಿನಿ ತಬ್ಬಿಕೊಂಡಳು. ಇಬ್ಬರ ಕಣ್ಣುಗಳಿಂದಲೂ ಆನಂದ ಬಾಷ್ಪಗಳುದುರಿದವು. ಪರಸ್ಪರ ಅಗಲುವಿಕೆಯ ನೋವು ಇಬ್ಬರ ಹೃದಯದಲ್ಲಿಯೂ ಯಾವುದೋ ಮೂಲೆಯಲ್ಲಿ ಸುಪ್ತವಾಗಿ ಇದ್ದೇ ಇತ್ತು. ಶಾಲಿನಿ ಇನ್ನೊಮ್ಮೆ ತಮ್ಮ ಮನೆಗೆ ಹೇಗೆ ಬರುವಳೆಂದು ಜಾಣೆಯಾದ ವಿಶಾಲಿ ಮೊದಲೇ ತರ್ಕಿಸಿಬಿಟ್ಟಳು. . . ಅತ್ತಿಗೆಯಾಗಿ ಬರುವಳು ! ಅಣ್ಣ ಗೋಪೀನಾಥ ಮತ್ತು ಶಾಲಿನಿಯ ಪ್ರೇಮದ ಗುಟ್ಟು ಅವಳಿಗೆ ಹೊಸದೇ ? ಶಾಲಿನಿಯು ಮಲೆನಾಡಿನಲ್ಲಿಯ ನಿಜವಾದ ಜೀವನದ ಹೋರಾಟವನ್ನು ಕಣ್ಣಾರೆ ಕಂಡಳು, ಮನವಾರೆ ಮೆಚ್ಚಿದಳು. ತಾನು ನೋಡಿದುದೆಲ್ಲವನ್ನೂ ವಿಸ್ತಾರವಾಗಿ ತನ್ನ ಅಣ್ಣನಿಗೆ ತಿಳಿಸಬೇಕೆಂಬ

ಅವಳ ತವಕ ಅಷ್ಟಿಷ್ಟಲ್ಲ ಕೊಲ್ಲಾಪುರವನ್ನು ಮುಟ್ಟಿದೊಡನೆಯೇ ತಾನು ಕಂಡ ಮಲೆನಾಡಿನ ನಿಸರ್ಗ ಮನೋಹರ ದೃಶ್ಯಗಳನ್ನೆಲ್ಲ ವಸಂತನಿಗೆ ತಿಳಿಸಿದಳು ವಿವರವಾಗಿ ಅಲ್ಲಿಯ ಜನರ ಜೀವನವು ನಿಜವಾಗಿಯೂ ಕಷ್ಟತರವಾದುದು ಅಲ್ಲಿ ಮಳೆ ಹೆಚ್ಚು ಬೆಳೆ ಕಡಿಮೆ ಅಡಿಕೆಯ ಕೃಷಿಯಷ್ಟು ಕಷ್ಟತರವಾದುದು ಇನ್ನೊಂದಿಲ್ಲ ಮುಂತಾಗಿ ಕೂಲಂಕಷವಾಗಿ ಅವನಿಗೆ ತಿಳಿಯ ಹೇಳಿದಳು ಎಲ್ಲಕ್ಕಿಂತ ಹೆಚ್ಚಾಗಿ ಅಲ್ಲಿಯ ಜನರ ಸೌಜನ್ಯವನ್ನು ಅವಳು ಮೆಚ್ಚಿರುವಳಂತೆ ಅದಕ್ಕೆ ವಿಶಾಲಿಯದೇ ಉದಾಹರಣೆಯನ್ನು ಕೊಟ್ಟಳು ಬಯಲುಸೀಮೆಯ ಜನರಾದ ನಾವು ಮಾತ್ರ ಜೀವನದ ಹೋರಾಟ ನಡೆಯಿಸುವವರು ಬೇರಾರಲ್ಲ-ವೆಂದರೆ ತಪ್ಪಾದೀತು ಪ್ರಪಂಚದ ಮೂಲೆ ಮೂಲೆಯಲ್ಲಿಯೂ ಇದು ಇದ್ದೇ ಇದೆ ಇದರ ಹಿನ್ನೆಲೆಯಲ್ಲಿ ಮನುಷ್ಯನು ಒಳ್ಳೆಯದನ್ನು ಮಾಡುವುದು ಕೆಟ್ಟದನ್ನು ಮಾಡುವುದು ಪಾಪವೆಂದು ಧಾರ್ಮಿಕ ಜೀವನದಿಂದ ಕಂಡು-ಕೊಂಡನು ಕ್ರಮೇಣ ಸಾಮಾಜಿಕ ಜೀವನಕ್ಕಿಳಿದು, ರಾಜಕೀಯ ಜೀವನಕ್ಕೆ ಪುಟಚೆಂಡಿನಂತೆ ಜಿಗಿದ ಎಲ್ಲರೂ ಒಂದಾಗಿ ಹೊಸ ನಾಡನ್ನು ಕಟ್ಟಿ ವಿಶ್ವ ಭ್ರಾತೃತ್ವವನ್ನು ಬೆಳೆಯಿಸಿಕೊಳ್ಳುವ ಕನಸನ್ನು ಕಂಡನು ದೇಶವತ್ಸಲರಾದ ಚಿರತಾರುಣ್ಯದ ರಕ್ತ ಹರಿಯುತ್ತಿರುವ ತರುಣ–ತರುಣಿಯರಿಗೆ ಪ್ರವೇಶವನ್ನು ಕೊಡಬೇಕೆಂದು ಸಾರಿದನು ಒಂದೇ ಕುಲ–ಅದಾವುದು ?–ಮನುಕುಲ ! ಹೀಗೆ ಭಾವಿಸಿ 'ಬಾಳುವೆವು ನಾವು' ಎಂಬ ಮಂತ್ರವನ್ನು ಪಠಿಸಬೇಕೆಂದು ನೆನಸಿದನು

* * * *

ಶಾಲಿನಿಯು ನಾವು ಕಲಿತ ವಿದ್ಯೆಯನ್ನು ಸದುಪಯೋಗ ಮಾಡಿಕೊಳ್ಳಲು ಅದನ್ನು ಸಾರ್ಥಕಪಡಿಸಿಕೊಳ್ಳಲು ಮಲೆನಾಡಿಗೆ ಹೋಗಿ ಅಲ್ಲಿ ತನ್ನ ಜೀವನ ದಾನ ಮಾಡುವೆನೆಂದಳು ವಸಂತ ಅವಳ ಆ ಕಳಕಳಿಯ ಅಭಿಪ್ರಾಯಕ್ಕೆ ಹೃತ್ಪೂರ್ವಕವಾಗಿ ಸಮ್ಮತಿಯನಿತ್ತನು ಆದರೆ ತಾಯಿ–ತಂದೆ ಒಪ್ಪುವುದು ಬೇಡವೇ ? ಅವರಿಗೆ ಅವನು ಪತ್ರ ಬರೆದನು 'ಎಲ್ಲವೂ ನಿಮ್ಮದೇ ಪ್ರಪಂಚ ಈಗ ವಿವೇಕಯುತವಾಗಿ ನಡೆದುಕೊಂಡು, ಒಳ್ಳೆಯ ರೀತಿಯಿಂದ ನಿಮ್ಮ ಭಾವೀ ಜೀವನವನ್ನು ರೂಪಿಸಿಕೊಳ್ಳುವುದಿದ್ದರೆ ನಾವು ಬೇಡವೆಂದು ಹೇಳುತ್ತೀ-ವೆಯೇ ? ನಮ್ಮ ಕಾಲ ಮುಗಿಯಿತು. ಈಗ ನಿಮ್ಮ ಕಾಲ ಬಂದಿದೆ ಶಾಲಿ-

ನಿಯ ಸದಭಿಪ್ರಾಯದಲ್ಲಿ ನಮಗೆ ತುಂಬಾ ಸಹಾನುಭೂತಿ ಹಾಗೂ ಬೆಂಬಲ-ವಿದೆ'ಯೆಂದು ಪತ್ರ ಬರೆದರು

ಶಾಲಿನಿಯು ಗೋಪೀನಾಥನನ್ನು ಮದುವೆಯಾದಳು ಆತನೊಡನೆ ಅವನೂರಿನಲ್ಲಿದ್ದುಕೊಂಡು ನಿರಕ್ಷರರನ್ನು ಸಾಕ್ಷರರನ್ನಾಗಿ ಮಾಡುವುದು ರೋಗ-ರುಜಿಗಳನ್ನು ತಡೆಗಟ್ಟಲು ಕೆಲವೊಂದು ಉಪಾಯಗಳನ್ನು ಅವರಿಗೆ ತಿಳಿಸುವುದು, ಬಡವರಾದ ಹಳ್ಳಿಯ ಜನರಲ್ಲಿ ಉದ್ಯೋಗಶೀಲತೆಯನ್ನುಂಟು ಮಾಡುವುದು, ಸ್ತ್ರೀ ವಿದ್ಯಾಭ್ಯಾಸ-ಮುಂತಾದ ಸುಧಾರಣೆ ಕಾರ್ಯಗಳನ್ನು ಕೈಕೊಂಡು ಮಲೆನಾಡಿನ ಜನರನ್ನು ಪೂರ್ಣ ಮನುಷ್ಯರನ್ನಾಗಿ ಮಾಡುವ ಸಂಕಲ್ಪವಿತ್ತು ಇದರೊಡನೆ ಗೋಪೀನಾಥನಲ್ಲಿ ಸ್ತ್ರೀ ಸಹಜವಾದ ಪ್ರೇಮ ಬೆಳೆಯಿತೇವಿನಾ ಕಾಮವಲ್ಲ

ಗೋಪೀನಾಥ ಎಂ ಎ ವರೆಗೂ ಓದಿ, ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದನು ಆಮೇಲಿಂದ ಕಾಲೇಜ್‌ನಲ್ಲಿ ಕನ್ನಡದ ಪ್ರೊಫೆಸರ್ ಆಗಿ ನಿಯಮಿಸ-ಲ್ಪಟ್ಟನು ಶಾಲಿನಿಯು 'ದೀನ ಜನರುದ್ಧಾರ ಕಾರ್ಯ'ವನ್ನು ಕೈಕೊಂಡಳು ಮಲೆನಾಡಿನ ಆ ಹಳ್ಳಿಯಲ್ಲಿ 'ಶಾಲಿನೀ ನಿವಾಸ' ಯೆಂಬೊಂದು ಕುಟೀರ ಅಲ್ಲಿಂದ ಅವಳು ತನ್ನ ಸಂದೇಶವನ್ನು ಬೀರಹತ್ತಿದಳು-ಬಾಯಿಂದ ಮಾತ್ರವಲ್ಲ, ಕೈಯಿಂದ ಕೂಡ ಗಂಡಸರೆಲ್ಲ ನಾಚಿದರು ತಾಸುಗಟ್ಲೆ ಭಾಷಣದ ಸುರಿಮಳೆ ಸುರಿಸುವುದೇ ತಮ್ಮ ಹಣೆಯಬರಹವೆಂದು ವಿಷಾದ ವ್ಯಕ್ತಪಡಿಸಿದರು ಕಷ್ಟದ ಕೆಲಸಗಳು ಗಂಡಸರಿಗೆ, ಲಲಿತ ಕಲೆಗಳು ಹೆಂಗಸರಿಗೆ- ಹೀಗೆಂದು ಸಾಮಾನ್ಯ ಒಂದು ನಿಯಮವಿರುವುದಾದರೂ ಶಾಲಿನಿ ಈ ನಿಯಮವನ್ನು ಇನ್ನೂ ಮುಂದೆ ಒಯ್ದಿದ್ದಳು ಒಂದು ಸ್ವಯಂಸೇವಿಕೆಯರ ದಳವನ್ನು ಸಹ ಸಂಘಟಿಸಿದಳು ವಿಶೇಷ ಹೊತ್ತ ಗಂಡಸರಿಗೇ ಈಗಿನ ಕಾಲದಲ್ಲಿ ತಮ್ಮ ಮಾನ ಪ್ರಾಣಗಳನ್ನು ಉಳಿಸಿಕೊಳ್ಳುವುದು ಪ್ರಯಾಸವಾದಾಗ, ಹೆಂಗಸರಿಗೆ ಯಾರು ಗತಿ? ಜೀವಕ್ಕಾಗಿ, ಮಾನಕ್ಕಾಗಿ ಸಿಂಹಕ್ಕಿರುವ ಧೈರ್ಯವನ್ನು ತಮ್ಮಲ್ಲಿ ಆವೇಶ ಮಾಡಿಕೊಂಡು ರಣ ಚಂಡಿಗಳಂತೆ ಹೋರಾಡಿ, ಮೂರ್ಖರನ್ನು ಬಲಿ ತೆಗೆದುಕೊಳ್ಳುವ ಉಪಾಯವೂ ಹೆಂಗಸರಿಗೆ ಅಂತಹ ಸಮಯ ಬಂದಾಗ ತಿಳಿ-ದಿರಬೇಕು. ಕಾಲ ಬಂದರೆ ತಮ್ಮ ಜೀವ ಉಳಿಸಿಕೊಳ್ಳಲು ಹೆಂಗಸರ ಮಾನಕ್ಕೆ ತಿಲತರ್ಪಣ ಕೊಡಲೂ ಈ ಗಂಡಸರು ಹಿಂದೆ ನೋಡರೆಂದೂ ಶಾಲಿನಿಯ

ವೈಯಕ್ತಿಕ ಅಭಿಪ್ರಾಯ. ಹೀಗೆ ಆನಂದದ ಮಲೆನಾಡಿನ ಪುಟ್ಟ ಹಳ್ಳಿಯ ಜನರು ಪೂರ್ಣತ್ವವನ್ನು ಪಡೆದರು.

*  *  *  *

ಸ್ವಾತಂತ್ರ್ಯೋದಯದಿಂದ ಹೆಂಗಸರ ಹೊಣೆ ಹೆಚ್ಚಿದ್ದೇ ನಿಜವಾದರೆ ಅವರು ತಮ್ಮ ಜೀವನವನ್ನು ಶಾಲಿನಿಯಂತೆ ಸಾರ್ಥಕಪಡಿಸಿಕೊಳ್ಳುವುದು ವಿಹಿತ. ನಾಲ್ಕಾರು ಮಕ್ಕಳನ್ನು ಹಡೆದು, ಸಂಸಾರ ನಿರ್ವಹಣವೇ ಪರಮ ಶ್ರಮ ಪೂರ್ಣವಾದ ಕೆಲಸ ಮತ್ತು ಅದೇ ಹೆಂಗಸಿನ ಅಂತಿಮ ಗುರಿ ಮುಕ್ತಿಯ ಸಾಧನವೆಂದೂಹಿಸಿದರ ವಿಹಿತವಾಗಲಾರದು. ಸರ್ವ ಜನರಿಗೆ ಹಿತ ವಾಗುವಂತಹ ಸಾಮಾಜಿಕ ಕಾರ್ಯಗಳಲ್ಲಿಯೂ ಮುಕ್ತಿಯ ಮುತ್ತು ಅಡಗಿದೆ.

*  *  *  *

ಗೋಪೀನಾಥನಿಗೆ ತಾನು ಕೊಲ್ಲಾಪುರಕ್ಕೆ ಹೋದುದು ಸಾರ್ಥಕವಾಯಿ ತೆಂದೆನಿಸಿರಬೇಕು. ಆತನಿಗೂ ಶಾಲಿನಿಯೊಂದು ಮೋಹದ ಬೊಂಬೆಯಾಗಿರು ವುದು ಬೇಡವೆನಿಸಿತ್ತು. ಸಾರ್ವಜನಿಕ ಕ್ಷೇತ್ರದಲ್ಲಿ ದುಡಿಯುವ ಪತ್ನಿ ದೊರೆತುದ ರಿಂದ ಆತನ ಪುಣ್ಯಕ್ಕೆ ಎಣೆಯೇ ಇರಲಿಲ್ಲ. ಈಗ ಆತನಿಗೆ 'ಬಾಳುವೆವು ನಾವು' ಮಂತ್ರದಲ್ಲಿ ಸತ್ಯತೆ ಹೊಳೆಯಿತು.

ಗೋಪೀನಾಥ-ಶಾಲಿನಿ ನಿಜವಾಗಿಯೂ ಧನ್ಯರು. ಅವರಿಂದ ಉಪಕೃತಿಗಳನ್ನು ಪಡೆದ ಜನರು ಇನ್ನೂ ಹೆಚ್ಚು ಧನ್ಯರು. ನಾವು ಯಾವಾಗಲೂ ಅಜ್ಞಾನಿಗಳಿಗೆ ಜ್ಞಾನದ ದೀವಟಿಗೆಯನ್ನು ಹಿಡಿಯೋಣ. ಅವರನ್ನು ಮನುಷ್ಯ ರನ್ನಾಗಿ ಮಾಡೋಣ. 'ಬಾಳುವೆವು' ಮಂತ್ರವನ್ನು ಕಾರ್ಯತಃ ತಂತ್ರದಲ್ಲಿ ತರೋಣ.

ಸತ್ಯಯುಕ್ತವಾದ ಬಾಳ ಹೊಳೆ ಹರಿಯಲಿ. ಗಾಳಿ ಗೋಪುರ ಕಟ್ಟುವ ಭಾಷಣ ಯುಗ ಅಳಿಯಲಿ. ಕಾರ್ಯ ಯುಗ ಆರಂಭವಾಗಲಿ.



# ಇದೆಂತಹ ಆದರ್ಶ !

ಪ್ರೀತಿಸದವನೊಡನೆ, ಕಣ್ಣಿಗೆ ಕಾಣದ ಅಪರಿಚಿತನೊಡನೆ ಮದುವೆ ! ಮದುವೆಯ ಶಬ್ದ ಎಷ್ಟು ಹಗುರವಾಗಿದೆ ಈಗ ! ಆದರೆ ಇದನ್ನು ಹೊತ್ತವರ ಭಾರ ಕಡಿಮೆಮಾಡಲು ಬರುವವರಾರು ? ಇದರ ಸಮಾರಂಭದ ವೇಳೆಯಲ್ಲಿ ಜಾತ್ರೆಗೆ ನೆರೆದಂತೆ ಜನ ನೆರೆಯುತ್ತಾರೆ ಸಮಾರಂಭದ ಹೆಸರು ಸಮಾಧಿ ಯಾಗುವಾಗ, ಅದು ಹಾಗೆ ಆಗಲೇಬೇಕಾದುದು ಅನಿವಾರ್ಯ ಬೇರೆ ಮಾರ್ಗ ವಿಲ್ಲ ಎಂದು ಎಷ್ಟು ಸುಲಭದಲ್ಲಿ ಸಮಾಜ ಹೊಣೆಹಾರಿಸಿಕೊಂಡು ಬಿಡುತ್ತದೆ

ಶಾರದೆಯು ಸಂಜೀವರಾಯರ ಹೆಸರನ್ನು ಕೇಳಿಯೂ ಇರಲಿಲ್ಲ! ಕಣ್ಣಿಂದ ನೋಡಿಯೂ ಇರಲಿಲ್ಲ ಆಕೆ ಚಿಕ್ಕಂದಿನಿಂದ ಪ್ರೀತಿಸಿದುದು ದೇವಿದಾಸ ನನ್ನು ಅವಳ ತಂದೆ ರಾಮರಾಯರು ಬೆಳೆದ ಹುಡುಗಿಯನ್ನು ಹೆಚ್ಚು ಕಾಲ ಮನೆಯಲ್ಲಿಟ್ಟುಕೊಳ್ಳುವುದು ನ್ಯಾಯವಲ್ಲವೆಂದು ಕುಲಪುರೋಹಿತರಾದ ತಿಪ್ಪಾ-ಭಟ್ಟರ ಮಧ್ಯಸ್ಥಿಕೆಯಿಂದ ಸಂಜೀವರಾಯರಿಗೆ ಶಾರದೆಯನ್ನು ಕೊಟ್ಟು ಮದುವೆ ಮಾಡುವುದೆಂದು ನಿರ್ಧರಿಸಿಯೂ ಬಿಟ್ಟರು ಹುಡುಗಿಯ ವಯಸ್ಸು ಹದಿನಾರು ಮದುವೆಯಾಗುವ ವರನ ವಯಸ್ಸು ನಲ್ವತ್ತಕ್ಕೆ ಮೀರಿತ್ತು ಅದು ಮೊದಲು ಇಬ್ಬರು ಮುತ್ತೈದೆಯರು ಸತಿಭಾಗ್ಯಪಡೆದು ವಿಮುಕ್ತರಾಗಿದ್ದರು ಈಗ ಸಂಜೀವರಾಯರಿಗೆ ನಡೆಯುತ್ತಿರುವುದು ಮೂರನೆಯ ಮದುವೆ ಮೊದಲಿನ ವಿವಾಹವಾಗುವ ವೇಳೆಗೆ ಅವರು ಆಗರ್ಭ ಶ್ರೀಮಂತರೇನೋ ನಿಜ ಎರಡನೆ ಮದುವೆ ವೇಳೆಗೆ ಸಂಪತ್ತು ಅರ್ಧಕ್ಕರ್ಧ ಕರಗಿ, ಈ ಮದುವೆಯ ಕಾಲಕ್ಕೆ ಮನೆತನದ ಹೆಸರು ಮಾತ್ರ ಉಳಿದಿತ್ತು ಅವರು ಸಾಯುವ ವರೆಗೆ ಹೆಣ್ಣಿಗೆ ಅನ್ನ ವಸ್ತ್ರಕ್ಕೆ ದಾರಿದ್ರ್ಯವಿರಲಾರದು ಬಂಗಾರದ ಹೆಸರು ಕೇಳಬಹುದಷ್ಟೆ ಅಂತೂ ತಿಪ್ಪಾಭಟ್ಟರ ಮಾತಿಗೆ ಮರುಳಾಗಿ ರಾಮರಾಯರು ನೆಂಟಸ್ತಿಕೆಗೆ ಒಪ್ಪಿಕೊಂಡರು.

*   *   *   *

ದೇವಿದಾಸನು ಆಕೆಯನ್ನು ಮದುವೆಯಾಗುವ ಸವಿಕನಸನ್ನು ಮೊದಲು ಕಂಡಿದ್ದನು ಅವಳ ಯೋಗ್ಯತೆಗೆ ಮೀರಿದವನು ಇನ್ನೂ ಇಪ್ಪತ್ತುವರ್ಷದ ಯುವಕ. ಮದುವೆಯಾದರೆ–ಹೆಂಡತಿಯನ್ನು ಪರಮ ಸುಖಸಾಮ್ರಾಜ್ಯದಲ್ಲಿ

ತೀಲಿಸುವ ಹುಮ್ಮಸ್ಸಿದೆ ಆ ಚೈತನ್ಯ ಆತನನ್ನು ಸದಾ ಹಿಡಿಯುತ್ತಿತ್ತು ಅದೆಷ್ಟೋಬಾರಿ ದೇವಿದಾಸ ಶಾರದೆ ಅಪ್ಪಿತಪ್ಪಿಯಾದರೂ ಗಂಡಹೆಂಡತಿಯೆಂದು ಬಾಯಿಬಿಟ್ಟು ಕರೆದುದೂ ಇದೆ ಅವರಿಬ್ಬರ ಸಮಾಗಮ ಎಲ್ಲಿ ಯಾವಾಗ ನಡೆಯುತ್ತಿತ್ತೆಂಬ ನಿಯಮವಿರಲಿಲ್ಲ ಶಾರದೆಯ ಅಣ್ಣ ಜೀವೋತ್ತಮನಿಗೂ ದೇವಿದಾಸನೆಂದರೆ ತುಂಬಾ ಪ್ರೀತಿ ಆತ ತನ್ನ ತಂಗಿಯ ಮನೋಗತವನ್ನು ಅರಿತಿದ್ದನು ಸಂಜೀವರಾಯರೊಡನೆ ಅವಳ ವಿವಾಹ ನಡೆಯುವುದೆಂದು ಕೇಳಿ ಆತನೂ ಆಶ್ಚರ್ಯಪಟ್ಟನು ತಂದೆಯ ಅರವತ್ತರ ಅರಳು ಮರಳು ಸ್ವಭಾವವನ್ನು ನೆನೆದು ತುಂಬಾ ವಿಷಾದಪಟ್ಟನು ಶಿವ್ವಾಭಟ್ಟನನ್ನು ಶಪಿಸಿದನು ಆದರೆ ವಿಧಿಯನ್ನೆದುರಿಸುವವರಾರು ? ಯುಗ ಯುಗಗಳಲ್ಲಿಯೂ ವಿಧಿಯನ್ನು ನಂಬಿ ಸಮ್ರಾಟರಾದವರು ಭಿಕ್ಷುಕರಾಗಿಯೂ, ಭಿಕ್ಷುಕರು ಸಮ್ರಾಟರಾಗಿಯೂ ಆಗುವುದು ಇದ್ದೇ ಇದೆ ವಿಧಿದೇವತೆಗೆ ಹೆಣ್ಣು, ಹೊನ್ನು ಮತ್ತು ಮಣ್ಣು ಪ್ರಬಲ ಆಯುಧಗಳು ಅಥವಾ ಗಾಳದ ಕೊಂಡಿಗಳು ಈ ಗಾಳದ ಕೊಂಡಿಗಳಿಂದ ಮಾನವೀಮೃಗಗಳನ್ನು ಹಿಡಿದು ಆಸ್ವಾದಿಸುತ್ತಾಳೆ ಆಕೆ ಮನಸ್ಸು ಮಾಡಿದರೆ ಯಾವ ಕೆಲಸ ನಿಲ್ಲುತ್ತದೆ ? ಸಂಜೀವರಾಯರಿಗೆ ಶಾರದೆಯನ್ನು ಕೊಟ್ಟು ಎಣಿಸಿದುದಕ್ಕಿಂತ ಬೇಗ ಮದುವೆ ನಡೆಯಿತು ನಲ್ವತ್ತೆರಡು ವರ್ಷದ ಸಂಜೀವರಾಯರು ಇಪ್ಪತ್ತನಾಲ್ಕು ವರುಷದ ತರುಣನಂತೆ ನಟಿಸಿದರು ಶಾರದೆಗೆ ಸುಸ್ವಾಗತವನ್ನೀಯುವ ಶುಭ ಸಮಾರಂಭದಲ್ಲಿ— ಗೃಹಪ್ರವೇಶದ ದಿನ ಸಂಜೀವರಾಯರಿಗೆ ಹೆಣ್ಣು ಬೇಕು ಶಾರದೆಗೆ ಮಣ್ಣು ಬೇಕು ಅವರಿಗೆ ಮಸಣ 'ಬಾ' ಎಂದು ಕೈ ಎತ್ತಿ ಕರೆಯುತ್ತದೆ ಇವಳಿಗೆ ಮನ್ಮಥ 'ಬಾ' ಎಂದು ಕರೆಯುತ್ತಾನೆ ಹೀಗೆ ಪರಸ್ಪರ ಆಭಾಸ ! ಈ ಪ್ರಾಣಿಯಹತ್ತಿರ ಏನು ಮಾತನಾಡುವುದಿದೆ ? ಅವನನ್ನು ನೋಡಲು ಕೂಡ ಇಷ್ಟಪಡಳು ಸರಸವನ್ನು ಬಯಸಿದ ಸಂಜೀವರಾಯರಿಗೆ ವಿರಸವನ್ನು ಪ್ರಕಟಿಸುವ ಶಾರದೆಯ ಒರಟು ಸ್ವಭಾವ ತಿಳಿದು ತುಂಬಾ ಬೇಸರವಾಯಿತು ತನ್ನನ್ನು ಅಷ್ಟು ಉದಾಸೀನವಾಗಿ, ಕಸಕ್ಕಿಂತ ಕೀಳಾಗಿ ನೋಡುವ ಅವಳ ಮೇಲೆ ತಿರಸ್ಕಾರ ಹುಟ್ಟಿತು ಅವರಿಗೆ ವಿಷಯಲಾಲಸೆಯ ಜ್ವಾಲೆ ಅವರಲ್ಲಿ ಇನ್ನೂ ಆರಿಲ್ಲ ಪ್ರತಿಯಾಗಿ ಪ್ರಜ್ವಲಿಸುತ್ತಾ ಇದೆ ಆಕೆಯನ್ನು ಬಲಾತ್ಕರಿಸದೆ ಅನ್ಯಮಾರ್ಗವಿಲ್ಲ ಅವರಿಗೆ ಒಂದು ದಿನ ಅದನ್ನೂ ಮಾಡಲು ಉದ್ಯುಕ್ತರಾದರು ಅವರು ತಮ್ಮ ಕೊಠಡಿಯಲ್ಲಿದ್ದುಕೊಂಡು ನಡುಮನೆಯಲ್ಲಿದ್ದ ಶಾರದೆಯನ್ನು—

‘ ಶಾರೀ, ಇಲ್ಲಿ ಬಾ ’ ಎಂದು ಕರೆದರು

‘ ಏಕೆ ? ’ ಎಂದಳು ಶಾರದೆ

‘ ಬೇಕು, ಬೇಗ ಬಂದು ಹೋಗು ’ ಎಂದರು

‘ ನಾನು ಬರುವುದಿಲ್ಲ ’

‘ ಬರದಿದ್ದರೆ ಎಳೆದುಕೊಂಡು ಬರುತ್ತೇನೆ ’

‘ ಧೈರ್ಯವಿದ್ದರೆ ಹಾಗೆ ಮಾಡಬಹುದು ’

ಅಬ್ಬ ! ಇವಳ ಸೊಕ್ಕೆಷ್ಟು ? ನೋಡಿಯೇ ಬಿಡುತ್ತೇನೆ– ಎಂದವರೇ ಆಕೆಯನ್ನು ಬಲಾತ್ಕರಿಸಹೋದರು ಆವಳು ಅಲ್ಲಿಯೇ ಕೈಗೆ ಸಿಕ್ಕಿದ ಕತ್ತಿಯನ್ನು ತೆಗೆದುಕೊಂಡು ವಿಷಕಾರುವ ಸರ್ಪಿಣಿಯಂತಾಗಿ ಆತನನ್ನು ರೌದ್ರಾವೇಶದಿಂದ ಕಂಡಳು ನಾರಿ ಇದ್ದವಳು ಮಾರಿಯಾದುದನ್ನು ಅಂದೇ ನೋಡಿದರು ಪಾಪ ! ಇಂದಿನ ಹೆಂಡಂದಿರ ಇತಿಹಾಸವೇ ಬೇರೆ ಈ ಹೆಂಡತಿಯದು ಅತ್ಯಂತ ಆಧುನಿಕ ಪದ್ಧತಿಯ ಪಾತಿವ್ರತ್ಯಾಚರಣೆ ! ಅವಳ ಕೈಯಲ್ಲಿದ್ದ ಕತ್ತಿ-ಯನ್ನು ನೋಡಿ ಸಂಜೀವರಾಯರು ನಿರ್ಜೀವರಾಯರಾಗಿಬಿಟ್ಟರು ಇಂತಹ ಹೆಣ್ಣುಮಕ್ಕಳ ಸಹವಾಸವೇ ಬೇಡವೆಂಬಷ್ಟಾಯಿತು ಅವರ ಮನಸ್ಸಿಗೆ !

‘ಕೈ ಹಿಡಿದ ಗಂಡನಿಗೆ ಹೀಗೆ ಮಾಡಬಹುದೇ ?’ ಎಂದು ಮೆತ್ತಗೆ ಕೇಳಿದರು

‘ನನಗೆ ಮದುವೆಯೇ ಆಗಿಲ್ಲ’ವೆಂದಳು ಶಾರದೆ

ರಾಮ ! ರಾಮ ! ಕಣ್ಣಾರೆ ನಡೆದ ಸಂಗತಿಯನ್ನು ಸುಳ್ಳು ಮಾಡುವ ಇಂದಿನ ಜನರ ಮಹಿಮೆಯನ್ನು ಕೊಂಡಾಡಲು ಒಂದು ನಾಲಿಗೆ ಸಾಕಾದೀತೇ? ‘ಅಲ್ಲೆ, ನಿನ್ನನ್ನು ನಾನು ಮದುವೆಯಾಗಿಲ್ಲೇನೆ ? ನಿನ್ನ ಬಾಯಿಂದ ಇಂತಹ ಮಾತುಗಳು ಹೊರಡಬಹುದೇ ?

‘ನನ್ನ ಮನಃಪೂರ್ವಕವಾಗಿ ಒಪ್ಪಿ ನಾನು ನಿಮ್ಮ ಕೈ ಹಿಡಿಯಲಿಲ್ಲ ಅದೊಂದು ಪೈಶಾಚಿಕ ಕೃತಿಯಿರಬಹುದು ನನ್ನ ಮಾನಸ ಸರೋವರದಲ್ಲಿ ಹುಟ್ಟಿವ ಕಮಲ–ದೇವಿದಾಸ’ ಎಂದಳು

‘ನಾನೂ ಚರಣದಾಸನೇ ಆಗಿರುವೆನಲ್ಲ ’

'ಚರಣದಾಸರಾದರೆ ನನ್ನ ಬಟ್ಟೆ ಒಗೆಯುವುದು ಅಡಿಗೆ ಮಾಡುವುದು ಮುಂತಾದ ಕೆಲಸ ಮಾಡಬೇಕಾದೀತು '

ಅಂತೂ ಅಂದು ನಡೆದ ಘಟನೆ ಯಾರ ತಿಳಿವಳಿಕೆಗೂ ಬರದೆ ತಣ್ಣಗಾಯಿತು ಸಂಜೀವರಾಯರಿಗೆ ಶಾರದೆಯ ಉಸಾಬರಿಯೇ ಬೇಡವಾ-ಯಿತು ಅಣ್ಣ ಜೀವೋತ್ತಮನ ಮೂಲಕ ತನಗೆ ಸಂಗೀತ ಕಲಿಯುವ ಆಸೆ ಇರುವುದೆಂದು ತಿಳಿಸಿ, ದೇವಿದಾಸನನ್ನು ಬರಮಾಡಿಕೊಂಡಳು

* * * *

ಎಂದಿನ ವರೆಗೆ ಶಾರದಗೆ ಮದುವೆಯಾಗಿರಲಿಲ್ಲವೋ ಅಂದಿನ ವರೆಗೆ ಅವಳು ತನ್ನ ವಸ್ತುವೆಂದು ಆತ ಭಾವಿಸಿದ್ದು ನಿಜ ಆದರೆ ಈಗ ಮಾತ್ರ ಹಾಗೆ ಎಣಿಸದೆ ಅವಳ ಕೇವಲ ಸಹೋದರಿಯೆಂದು ತಿಳಿದನು ಅವನು ಸಂಗೀತ ಕಲಾವಿದ ಮತ್ತು ಉತ್ತಮ ಗಾಯಕ ತಾನು ಕಲಿತ ವಿದ್ಯೆಯನ್ನು ಇತರರಿಗೆ ನಿರ್ವಂಚನೆಯಿಂದ ಯಾವುದೂ ಪ್ರತಿಫಲವಿಲ್ಲದೆ ತಿಳಿಯಪಡಿಸಬೇಕೆಂಬ ಸದಾ-ಶಯವುಳ್ಳವನು ಶಾರದೆಗೆ ಸಂಗೀತವನ್ನು ಬೋಧಿಸಲು ಹೇಗೆ ಹಿಮ್ಮೆಟ್ಟು ವನು ? ಅವಳ ಮನೆಗೆ ದಿನವೂ ಹೋಗಲಾರಂಭಿಸಿದನು ಊರಿನ ಜನರ ಸಂಶಯಕ್ಕೆ ಆತನ ಶಾರದಾಗೃಹ ಗಮನ ಅನ್ನ ಕೊಟ್ಟಿತು ಈ ಅನ್ನದಿಂದ ಪುಷ್ಟಿಯಾಗಿ ಅವರ ಸಂಶಯ ಒಂದು ರೂಪವಾಗಿ ಮಾರ್ಪಟ್ಟಿತು ಶಾರದೆಯ ಒಲ್ಮೆಯ ಬಲ್ಮೆಯೂ ದೇವಿದಾಸನ ಮೇಲೆ ಹೆಚ್ಚಾಗತೊಡಗಿತು ದೇವಿದಾಸ-ನಿಗೆ ಇದು ಸರಿ ಬೀಳಲಿಲ್ಲ ಒಂದು ದಿನ 'ಶಾರದಾ, ನಿನಗೂ ನನಗೂ ಬಾಲ್ಯ ದಿಂದಲೂ ಗೆಳೆತನವಿದೆ ನೀನು ಇನ್ನೂ ಕನ್ಯೆಯಾಗಿದ್ದಾಗ ನಿನಗೆ ನನ್ನ ಹೃದಯ ದಲ್ಲಿ ಸ್ಥಾನ ಕೊಟ್ಟಿದ್ದನ್ನು ನಾನು ಅಲ್ಲಗಳೆಯಲಾರೆ ಆದರೆ ಈಗ ಮಾತ್ರ ನೀನು ನನ್ನ ಸೋದರಿಯೆಂದು ಭಾವಿಸುವೆ ನೀನೂ ಹೀಗೆಯೇ ಭಾವಿಸಿದರೆ ಶ್ರೇಯಸ್ಕರ ಇದಕ್ಕೆ ತಪ್ಪಿ ನೀನು ಅನ್ಯಥಾ ಯಾವ ರೀತಿಯಲ್ಲಿ ನನ್ನನ್ನು ಕಂಡರೂ ನಾನು ಸಹಿಸಲಾರೆ ಗಂಡ ಹೇಗೂ ಇರಲಿ ಧರ್ಮ ಸಾಕ್ಷಿಯಾಗಿ ಕೈ ಹಿಡಿದಮೇಲೆ, ಮದುವೆ ಮದುವೆಯೇ, ಗಂಡ ಗಂಡನೇ ನಮ್ಮ ಹಿಂದೂ ಧರ್ಮದಲ್ಲಿ ಮದುವೆ ಇಷ್ಟು ಉನ್ನತ ಪವಿತ್ರ ಸ್ಥಾನದಲ್ಲಿದೆ ಇದೊಂದು ನಗೆಯ ನೋಟವಲ್ಲ ಗೊಂಬೆಯಾಟವಲ್ಲ ಸಂಜೀವರಾಯ ನಿನ್ನ ಗಂಡನೆಂದಮೇಲೆ ಆತನೊಡನೆ ಸೂರ್ಯ–ಚಂದ್ರರ ಸಾಕ್ಷಿಯಾಗಿ ಪಾಲಿಗೆ ಬಂದುದು ಪಂಚಾಮೃತ

ವೆಂದು ಬಾಳ್ವೆ ನಡೆಯಿಸಲೇಬೇಕು ಹಿಂದಿನ ಆದರ್ಶ ರಮಣಿಯರು ಇದರಿಂದ ಮುಕ್ತಿಯನ್ನು ಕಂಡರು ನೀನೂ ಹಾಗೆಯೇ ಮಾಡಬೇಕೆಂಬುದು ನನ್ನ ಅಭಿಲಾಷೆ ಸಂಗೀತ ಕಲಿಯುವ ನೆವದಿಂದ ನನ್ನನ್ನು ಕರೆಯಿಸಿಕೊಂಡು ಪ್ರೇಮದ ಮಧುರಾಲಾಪದಿಂದ ನನ್ನ ಮನವೊಲಿಸಿಕೊಳ್ಳಲು ಹಾತೊರೆಯುವ ನಿನ್ನ ಬುದ್ಧಿಯು ನಿಜವಾಗಿಯೂ ಭ್ರಮಿಸಿದೆಯೆಂದು ನಾನು ಭಾವಿಸುತ್ತೇನೆ ನಿನ್ನನ್ನು ಅಥವಾ ಸ್ತ್ರೀ ವರ್ಗವನ್ನು ಕೆಟ್ಟ ದಾರಿಯಲ್ಲಿ ತುಳಿಯುವಂತೆ ಪ್ರೇರಿಸುವುದು ಗಂಡಸಿಗೆ ಅತ್ಯಂತ ಸುಲಭವ ಕೆಲಸ ಆದರ್ಶ ಮಾರ್ಗವನ್ನು ತೋರಿಸುವುದು ಕಠಿಣ ಮತ್ತು ಅಪರೂಪ ಇಂತಹ ಒಳ್ಳೆಯ ಪುರುಷರಿದ್ದರೆ ನಮ್ಮ ಸ್ತ್ರೀ ಪ್ರಪಂಚ ಇನ್ನೂ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿತ್ತು ವಿವಾಹ ವಿಚ್ಛೇದ, ವಿಧವಾ ವಿವಾಹ, ಪ್ರೌಢ ವಿವಾಹ, ಸ್ತ್ರೀ-ಪುರುಷ ಸಮಾನ ಸ್ವಾತಂತ್ರ್ಯ— ಇವೆಲ್ಲ ನಮ್ಮ ದೌರ್ಭಾಗ್ಯದ ಪಿಂಡಗಳು ! ಯುಗಧರ್ಮ-ಕ್ಕನುಸರಿಸಿ ಇವನ್ನು ಅನುಭವಿಸದೆ ಗತ್ಯಂತರವಿಲ್ಲ ಈಗ ಹೇಳು ನಾನು ನಿನಗೆ ಬೇಕೆ, ನನ್ನ ಸಂಗತಿ ಬೇಕೆ ?” ಎಂದನು

ಶಾರದೆಗೆ ಕಂಬನಿ ಧಾರಾಕಾರವಾಗಿ ಇಳಿಯಿತು ದೇವಿದಾಸನ ಮನಸ್ಸು ಇಷ್ಟು ಪ್ರಸನ್ನಲ್ಲಿತವೆಂದು ಆಕೆ ಅಂದೇ ಅರಿತಳು ಎಷ್ಟೋ ಸಲ ಹೆಣ್ಣಿನಿಂದಲೇ ಎಣಿಸಲಾರದಷ್ಟು ಅನರ್ಥ ಪರಂಪರೆಗಳು ಒದಗುತ್ತವೆಂಬ ಬಗ್ಗೆ ತನ್ನನ್ನೇ ಉದಾಹರಣೆಯಾಗಿರಿಸಿ ದೇವಿದಾಸ ಅವಳ ಕಾಮ ಪಿಪಾಸೆಗೆ ಬಲಿ-ಯಾಗಿದ್ದರೆ, ಭಾರತದ ಆದರ್ಶವೇ ಸಮಾಧಿಹೊಂದುತಿತ್ತೆಂದೂ ಭಾವಿಸಿದಳು ನಮ್ಮಿಂದ ಘಟಿಸದೆ ಕೇವಲ ವಿಧಿಸಂಕೇತಗಳಾದ ಘಟನೆಗಳನ್ನು ಹಳಿದು ಪ್ರಯೋಜನವೇನೆಂದು ಅಂದಿನಿಂದ ಸಂಜೀವರಾಯರೊಡನೆ ಸುಖದಿಂದ ಸಂಸಾರ ಸಾಗಿಸಿಕೊಂಡು ಹೋಗುವುದಾಗಿ ದೇವಿದಾಸನಿಗೆ ವಚನವಿತ್ತಳು

- ದೇವಿದಾಸನನ್ನು ಸಂಜೀವರಾಯರು ಬಾಯಿತುಂಬಾ ಹೊಗಳಿದರು ‘ನಿನ್ನಂತಹ ಮನುಷ್ಯ ಪ್ರಪಂಚದಲ್ಲಿ ಅಪರೂಪ ಕಾಣಯ್ಯ ! ನಿನ್ನ ಪಾದ ತೊಳೆದುಕೊಂಡು ನೀರು ಕುಡಿಯಬೇಕು’ ಎಂದು ಆನಂದಭಾಷ್ಪವನ್ನು ಸುರಿಸಿದರು. ಅವರ ಒಡೆದುಹೋದ ಸಂಸಾರ ಮತ್ತೆ ಕೂಡಿತು ಅದೊಂದು ಆದರ್ಶ ಸಂಸಾರವಾಗಿ ಹಿತಮಿತದಿಂದ ಸಾಗಿತು. ಆದರೆ ವಯೋಸಾಮ್ಯವೊಂದು ಸಮಸ್ಯೆಯಾಗಿಯೇ ಉಳಿಯಿತು. ಇದೆಂತಹ ಆದರ್ಶ !

# ಬಾಳಿನ ಪಾತ್ರೆ ತುಂಬಲಿಲ್ಲ

ನಮ್ಮ ಕದಳೀಪುರವೆಂದರೆ ಏನು ಕೇಳುತ್ತೀರಿ ? ಊರಿನಲ್ಲಿ ಸಾಲು ಸಾಲಾಗಿ ಬಾಳೆಯ ಮರಗಳೇ ಹೆಚ್ಚು ಈಗಿನ ವೃಕ್ಷಾರೋಪಣಪರ್ವ ಹಿಂದಿನ ಕಾಲದಲ್ಲಿಯೂ ಇತ್ತು ನಮ್ಮೂರಿನ ಸಸ್ಯ ಸಮೃದ್ಧಿಯನ್ನು ನೋಡಿ ಸಂತೋಷ ಪಟ್ಟುಕೊಂಡೋ ಏನೋ, ಕಿಷ್ಕಿಂಧೆಯಿಂದ ವಾನರಸೈನ್ಯವೆಲ್ಲ ಬಂದು ಬೀಡು ಬಿಟ್ಟಿತ್ತು ರಾಮಾಯಣ ಕಥಾಮೃತವನ್ನು ಓದಿ ಸವಿಯುವ ನಮ್ಮ ಹಿಂದಿನ ಜನರು, ಪಾಪ ! ಮಂಗಗಳು ಬಾಳೆಯಹಣ್ಣುಗಳನ್ನು ತಿಂದರೆ ತಿನ್ನಲಿ, ಬರಗಾಲ ಬಂದರೆ ದೇವರು ಕೊಡುವವನಿದ್ದಾನೆ' ಎಂದು ಹೇಳುತಿದ್ದರೇ ವಿನಾ ಅವುಗಳಿಗೆ ಯಾವುದೇ ರೀತಿಯ ಕೇಡನ್ನು ಬಗೆಯುತ್ತಿರಲಿಲ್ಲ ಊರಿನಲ್ಲಿ ಎಲ್ಲರೂ ಹಣ್ಣು "ಮುದುಕ ಮುದುಕಿಯರೆ ತಮ್ಮ ಸಾತ್ವಿಕ ಸ್ವಭಾವದ ವರ್ಚಸ್ಸಿನಿಂದ ಸತತ ಪರಿಶ್ರಮದಿಂದ ದುಡಿದು, ಹೊಲಗದ್ದೆಗಳನ್ನು ಸಂಪಾದಿಸಿ, ಹಂಚಿನ ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿ ತುಂಬಿದ ಸಂಸಾರದ ಮಧ್ಯೆ ಬಾಳುತ್ತಿದ್ದರು ಸನಾತನ ಕರ್ಮಯೋಗಿಗಳವರು ! ಸತ್ಸಂಪ್ರದಾಯವನ್ನು ಅನುಸರಿಸುತ್ತಿದ್ದರು ಈಗಿನ ನಾಗರಿಕತೆ, ನಡೆನುಡಿಯೆಲ್ಲ ಅವರಿಗೆ ಅರ್ಥವಾಗದ ಒಗಟು ಕಾರಣ ಅವು ಶಾಶ್ವತವಾಗಿ ನಿಲ್ಲಲಾರವೆಂದು ಅವರ ವಾದ ಅವರು ಹಿಂದೂಧರ್ಮ, ಸಂಸ್ಕೃತಿಯನ್ನು ಆಳವಾಗಿ ಅಭ್ಯಸಿಸಿದರು ಧರ್ಮಸಾಮ್ರಾಜ್ಯದ ಪ್ರಜೆಗಳವರು. ಅವರ ಮುಖದಲ್ಲಿ ಅನವರತವೂ ಶಾಂತಿಯ ಕಳೆ ತುಂಬಿತ್ತು ಅವರಿಗೆ ಮಕ್ಕಳು ಬಿ ಎ ಎಂ. ಎ ತೇರ್ಗಡೆ ಹೊಂದಿದರೆಂದರೆ ಸುಲಭದಲ್ಲಿ ಅರ್ಥವಾಗದು ಸಂಸ್ಕೃತದಲ್ಲಿ ವಿದ್ವತ್ ಪರೀಕ್ಷೆ ಮುಗಿದಿದೆ, ಶಿರೋಮಣಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದೆಯೆಂದರೆ ಅವರ ಸಂತೋಷ ಮೇರೆಯರಿಯದು

ಒಂದು ಕಾಲದಲ್ಲಿ ತುಂಬಿದ ಊರು, ತುಂಬಿದ ಮನೆ ಕ್ರಮೇಣ ಮಸಣದ ಬೀಡಾಗಲಾರಂಭಿಸಿತು ಎಳೆಯ, ಮೀಸೆ ಬಾರದ ಮಕ್ಕಳೆಲ್ಲ ಹಳ್ಳಿ ಬಿಟ್ಟು ಪಟ್ಟಣ ಸೇರಿದರು ವಿದ್ಯೆಕಲಿಯುವ ನೆವದಿಂದ ಆಧುನಿಕ ಪಾಶ್ಚಾತ್ಯ ನಾಗರಿಕತೆಯ ಮೋಹದಲ್ಲಿ ಅವರವರ ತಂದೆ ತಾಯಿಯರಿಗೇ ಗುರುತುಸಿಕ್ಕದ ರೀತಿಯಲ್ಲಿ ಬದಲಾವಣೆ ಹೊಂದಿದರು ಅವರಲ್ಲಿ ಮಹಾತ್ಮಾ ಗಾಂಧಿಯವರ ಸತ್ಯಾಗ್ರಹ ಸಮರದಲ್ಲಿ ಭಾಗವಹಿಸಿದ ದೇಶಭಕ್ತರೂ ಇದ್ದರು ಹಳಬರಿಗೆ ಗಾಂಧಿ ಮಹಾತ್ಮ,

ನಲ್ಲಿ, ಎಣೆಯಿಲ್ಲದ ವಿಶ್ವಾಸ, ಸತ್ಯಹರಿಶ್ಚಂದ್ರನ ಸತ್ಯ, ಗೌತಮ ಬುದ್ಧನ ಅಹಿಂಸೆ, ರಂತಿದೇವ, ಶಿಬಿಚಕ್ರವರ್ತಿ, ಬಲಿ ಮೊದಲಾದವರ ತ್ಯಾಗ– ಇವು ಗಳನ್ನು ತಮ್ಮ ಜೀವನದಲ್ಲಿ ನಿತ್ಯವೂ ಅಳವಡಿಸಿಕೊಂಡ ಅವರಿಗೆ ಮೊದಮೊದಲು ತರುಣರ ಕಾರ್ಯದಲ್ಲಿ ಆಸಕ್ತಿ ಹುಟ್ಟಿತ್ತು ಕೊನೆಗೆ ಗಣಪನನ್ನು ಮಾಡಲಿಕ್ಕೆ ಹೋಗಿ ಹನುಮನನ್ನು ರೂಪಿಸಿದಂತೆ ಈ ತರುಣರ ಕಾರ್ಯಪ್ರವಾಹವು ಸ್ವಾರ್ಥ ಲಾಲಸೆಯಿಂದ ಮಲಿನಗೊಂಡೊಡನೆಯೆ ಹಿರಿಯರಿಗೆ ಮಕ್ಕಳಲ್ಲಿದ್ದ ವಿಶ್ವಾಸ ಹಾರಿಹೋಯಿತು ಗಾಂಧಿ ತಮ್ಮನ್ನೆಲ್ಲ ಉದ್ಧಾರದ ಮಾರ್ಗದಲ್ಲಿ ಒಯ್ಯುವ ನೆಂದು ತಿಳಿದಿದ್ದ ಜನರು ಹಲಕೆಲವು ಕಾಂಗ್ರೆಸ್ ಮುಖಂಡರ ಧೇನುಮುಖ ವ್ಯಾಘ್ರಸ್ವಭಾವದ ಕೂಲಂಕಷ ಪರಿಚಯದಿಂದ ಜಗತ್ತು ಉದ್ಧಾರವಾಗುವುದು ಅಷ್ಟರಲ್ಲಿಯೇ ಇದೆ ಇವರಿಗೆಲ್ಲ ಚಿತ್ತಭ್ರಮಣೆಯಾಗಿದೆ ಇವರು ಮುಂದಾ-ಳುಗಳಲ್ಲ – ಮಂದಾಳುಗಳು ! ಎಂದುಭಾವಿಸಿ ಕಾಂಗ್ರೆಸ್ ಮುಖಂಡರಿಗೆ ಗೋರಿಕಟ್ಟಲು ಮೊದಲೇ ಸಿದ್ಧತೆಗಳನ್ನು ಮಾಡಿಕೊಂಡಿದ್ದರು ಸಮತಾವಾದಿ ಗಳು ಆ ಗೋರಿಗಳ ಮೇಲೆ ಹಾಸಲು ಚಪ್ಪಡಿಕಲ್ಲುಗಳೊಡನೆ ಸಿದ್ಧರಾದರು ಹೀಗೆ ಹಳಬರೂ ಹೊಸಬರೂ ಕಾಂಗ್ರೆಸ್ ಮುಖಂಡರ ಸ್ಮಶಾನಯಾತ್ರೆಗಾಗಿ ಸದಾ ಕಾಯುತಿದ್ದರು

*　　*　　*　　*

ರಾಘವೇಂದ್ರರಾಯರಿಗೆ ಆರು ಮಂದಿ ಗಂಡುಮಕ್ಕಳು ಮತ್ತು ನಾಲ್ವರು ಹೆಣ್ಣುಮಕ್ಕಳು ಅವರ ಮೂಲ ಸ್ಥಳ ಹೂಬಳ್ಳಿಯಂತೆ ಅವರ ತಂದೆ ವೆಂಕಟ ರಾಯರು ಕೇವಲ ಒಡವರು ಜೀವನ ನಿರ್ವಹಣಕ್ಕಾಗಿ ಕದಳೀಪುರಕ್ಕೆ ಬಂದು ಕುಲಕರ್ಣಿಯಾಗಿ ಕೆಲಸ ಮಾಡಿ ಕ್ರಮೇಣ ಕ್ರಮೇಣ ಹಂಚಿನಮನೆ ಕಟ್ಟಿದರು ತುಂಬಿದ ಮನೆತನದಲ್ಲಿ ಹುಟ್ಟಿದ ಅವರಿಗೂ ಹತ್ತು ಮಕ್ಕಳನ್ನು ಪಡೆಯುವ ಭಾಗ್ಯ ! ಗಂಡು–ಹೆಣ್ಣುಮಕ್ಕಳಿಗೆ ಮದುವೆಯಾಯಿತು ಸೊಸೆ, ಅಳಿಯಂದಿರ ಮಧ್ಯೆ ಆ ಹಣ್ಣುಕೂದಲಿನ, ಹಲ್ಲಿಲ್ಲದ ಬೊಚ್ಚುಬಾಯಿ ಮುದುಕ ! ಎಲ್ಲರೂ ಅವರನ್ನು 'ರಾಯರೇ' ಎಂದು ಕರೆಯುವ ವಾಡಿಕೆ ರಾಯರು ನೂರಾರು ವಾರದ ಹುಡುಗರಿಗೆ ಅನ್ನದಾನ ಮಾಡಿದ್ದರು ಸಾವಿರಾರು ಜನರಿಗೆ ತನು-ಮನ ಧನದಿಂದ ಸಹಾಯ ಮಾಡಿದ್ದರು ಅವರು ಮಾಡಿದ ಕೆಲಸವನ್ನು ಯಾವ ಕಾಂಗ್ರೆಸ್ ಮುಖಂಡನೂ ಮಾಡಿರಲಾರ ದೀನ ಜನ ವತ್ಸಲರಾದ ರಾಯರಿಗೆ ಮಕ್ಕಳ ಭಿನ್ನ ಭಿನ್ನ ಸ್ವಭಾವವನ್ನು ನೆನೆದಾಗ ಮಾತ್ರ ಮನಸ್ಸಿನಲ್ಲಿ

ತುಂಬಾ ವೇದನೆಯುಂಟಾಗುತಿತ್ತು ಆ ಮಕ್ಕಳು ತಂದೆ ಜೀವದಿಂದಿರುವಾಗಲೇ ಪಿತ್ರಾರ್ಜಿತ ಸೊತ್ತನ್ನು ವಿಭಾಗಿಸಿಕೊಳ್ಳಲು ಕಚ್ಚಾಟಕ್ಕೆ ಪ್ರಾರಂಭಿಸಿದರು ಮಹಾತ್ಮರು ಎಂತಹ ರಾಮರಾಜ್ಯವನ್ನು ಪ್ರಸ್ತಾಪಿಸುವ ಕನಸಿನ ಮನೆ ಕಟ್ಟಿದರೂ, ಜನಸಾಮಾನ್ಯರಲ್ಲಿ ಆತ್ಮೋದ್ಧಾರದ ಪ್ರತಿಭೆ ಮಿಂಚಿದ ಹೊರತು ಸರ್ವೋದಯ ಸಮಾಜ ರೂಪುಗೊಳ್ಳಲಾರದು ನಮ್ಮ ಹಿರಿಯರ ಕಾಲದಲ್ಲಿ ಪ್ರತಿಯೊಂದು ಕುಟುಂಬವೂ ನೆಮ್ಮದಿಯಿಂದ ಬಾಳಿ, ಉತ್ತಮ ಆದರ್ಶವನ್ನು ಪ್ರತಿಬಿಂಬಿಸಿತ್ತು ವಿದೇಶೀಯರ ರಾಜ್ಯ ಕಾರ್ಯಭಾರ ಆರಂಭವಾದೊಡನೆಯೇ ವ್ಯಕ್ತಿಯಿಂದ ಕುಟುಂಬ, ಕುಟುಂಬದಿಂದ ಸಮಾಜ, ಸಮಾಜದಿಂದ ಜಾತಿ, ಜಾತಿಯಿಂದ ಧರ್ಮ ಬೇರೆ ಬೇರೆಯೆಂದು ತಿಳಿಯುವ ಮನೋಭಾವ ಉಂಟಾಯಿತು

ನೂರಾರು ಜನರಿಗೆ ಉಪಕಾರಿಯಾಗಿ, ಗೌರವಸ್ಥರ ಮನೆತನದಲ್ಲಿ ಹುಟ್ಟಿ, ದೊಡ್ಡ ಹಂಚಿನ ಮನೆಯನ್ನು ಕಟ್ಟಿ, ಈಗ ಶಾಂತ ಮನಸ್ಸಿನಿಂದ ಕಾಲಹರಣ ಮಾಡಬೇಕೆಂದು ಬಯಸಿದ ರಾಯರ ಹೃದಯಮಂದಿರವು ಮಾಯಾಮಂದಿರವಾಯಿತು ಒಬ್ಬಳು ಸೊಸೆಗೂ ಇನ್ನೊಬ್ಬಳು ಸೊಸೆಗೂ ಮೂಷಿಕ–ಮಾರ್ಜಾಲ ದ್ವೇಷ ಅವಳು ಮಾಡಿದ್ದು ಇವಳಿಗೆ ಸರಿಹೋರದು ಮಕ್ಕಳೊಳಗಂತೂ ದೇವ ದಾನವರ ವೈರ ಹೀಗೆ ಮನೆಯೊಂದು ಸಣ್ಣ ಕುರುಕ್ಷೇತ್ರವಾಗತೊಡಗಿತು ಅಣ್ಣ–ತಮ್ಮಂದಿರೊಳಗೆ ಹೊಡೆದಾಟ ಮೊದಲಾಯಿತು ರಾಯರು ಏನು ಮಾಡುತ್ತಾರೆ, ಪಾಪ! ಅವರದು ತುಂಬುಜೀವನ, ವಿಶಾಲ ಹೃದಯ, ಹಿಂದಿನವರಿಗೆ ಬದುಕಲಿಕ್ಕೆ ಬಾಳಲಿಕ್ಕೆ ಗೊತ್ತಿಲ್ಲವೆಂದು ಹೇಳುವ ಈಗಿನ ಜನರ ಜೀವನಾದರ್ಶ, ಜನತಾ ಭಾವವನ್ನನುಸರಿಸಿದರೆ, ನಮಗೆ ನರಕಕ್ಕಿಂತ ಕನಿಷ್ಟ ತರಗತಿಯ ಲೋಕವೇ ಗತಿಯೆಂದು ಎನಿಸದೆ ಇರಲಾರದು ರಾಯರ ಕುಟುಂಬದಲ್ಲಿಯ ಜಗಳ ದೊಡ್ಡದಾಗಿ, ಮಕ್ಕಳೊಳಗೆ ಕೊನೆಗೆ ಆರುಮನೆಗಳಾದವು ಎಲ್ಲರೂ ಒಂದಾಗಿ ಬಾಳಬೇಕಾದ ಆ ರಾಯರ ಮನೆತನ ನುಚ್ಚುನೂರಾಗಬೇಕೆ? ಇದು ಆಶ್ಚರ್ಯವಲ್ಲದಿದ್ದರೂ ಆಶ್ಚರ್ಯವೇ ಅಖಂಡ ಭರತ ಭರತಖಂಡದ ಕನಸು ಕಂಡ ಗಾಂಧಿಯ ಆಸೆಯೇ ಮಣ್ಣುಗೂಡಿ, ದೇಶವು ಒಡೆದ ಎರಡು ಮಡಿಕೆಯ ತುಂಡುಗಳಂತಾದಾಗ ರಾಯರ ಆಸೆ ನೆರವೇರದಿದ್ದುದೇನಾಶ್ಚರ್ಯ? ಅತ್ತ ಅಳಿಯಂದಿರ ಮನೆಗಳಲ್ಲಿ ಮದುವೆಯಾದ ಹೆಣ್ಣು ಮಕ್ಕಳಾದರೂ ಸುಖದಿಂದ ಇದ್ದಾರೆಯೇ? ದೊಡ್ಡ ಮನೆತನದಲ್ಲಿ ಹುಟ್ಟಿದವ

ರೆಂಬ ಅಹಂಭಾವದಿಂದ ಮೆರೆದು ಗಂಡಂದಿರ ಕೋಪಕ್ಕೆ ಪಾತ್ರರಾಗಿ, ಒಡವೆ ಇದ್ದೂ ಬಡವೆ, ಗಂಡನಿದ್ದೂ ಮುಂಡೆ ಎಂಬಂತೆ ದಿನ ನೂಕುತ್ತಿದ್ದರು

ರಾಯರು ಹತ್ತಾರು ಒಡೆದ ಸಂಸಾರಗಳನ್ನು ಒಟ್ಟುಕೂಡಿಸಿದ್ದರು ಆದರೆ ಸ್ವತಃ ತನ್ನ ಸಂಸಾರದಲ್ಲಿಯ ಛಿದ್ರಗಳನ್ನು ಕೂಡಿಸಲಿಕ್ಕಾಗದಷ್ಟು ದೌರ್ಬಲ್ಯ ಉಂಟಾದುದಕ್ಕೆ ತಮ್ಮ ದುರದೃಷ್ಟವನ್ನು ಹಳಿದುಕೊಂಡರು. ಅವರು ನೈತಿಕ ಬಲವನ್ನೇ ಕಳೆದುಕೊಂಡ ತಮ್ಮ ಮಕ್ಕಳನ್ನು ಹೇಗೆ ದಾರಿಗೆ ತಂದಾರು? ಆದರೆ ವೃದ್ಧಾಪ್ಯದ ಕಾಲದಲ್ಲಿ ಇಂತಹ ಗೃಹಛಿದ್ರದಿಂದ ಬೇಸತ್ತು ಮನೋರೋಗ ದಿಂದ ಸಾಯುವುದು ಯಾರಿಗೂ ಬೇಡ ! ಇಷ್ಟಾದರೂ ರಾಯರು ಪರಮಾತ್ಮನ ಪಾದಾರವಿಂದಗಳನ್ನು ಬಿಡಲಿಲ್ಲ ಹಿಂದಿನವರಿಗೆ ದೈವ ಬಲ ಹೆಚ್ಚಿತ್ತೆಂದು ಬೇರೆ ಹೇಳಬೇಕೇ ? ಈಗಿನವರಿಗೆ ದೈವೀಶಕ್ತಿಯಲ್ಲಿ ನಂಬಿಕೆ ಇಲ್ಲದಿರುವುದ-ರಿಂದಲೇ ಮಳೆ–ಬೆಳೆಗಳು ಸಕಾಲಕ್ಕಾಗದೆ ಉಪವಾಸದಿಂದ ಸಾಯುವಂತಾಗಿದೆ ರಾಯರಂತಹ ಜನರಿಗೆ ದೇವರು ಯಾವಾಗಲೂ ಕೈ ಹಿಡಿದೇ ಹಿಡಿಯುವನು

ನೀವು ನಂಬಿದರೆ ನಂಬಿ, ಬಿಟ್ಟರೆ ಬಿಡಿ–ಒಂದು ಕುಟುಂಬದಿಂದ ಬೇರೆ ಬೇರೆಯಾದ ಮಕ್ಕಳು ಪುನಃ ಒಟ್ಟುಗೂಡಬೇಕೆ ? ಇದರ ಹಿನ್ನೆಲೆಯಲ್ಲಿ ಯಾರ ಪವಾಡವಡಗಿದೆ ? ಜನರ ಮೇಲೆ ಅಧಿಕ ವರ್ಚಸ್ಸುಳ್ಳ ಸಾತ್ವಿಕ ಸ್ವಭಾವಿ ನಿತ್ಯಾ-ನಂದ ಸ್ವಾಮಿಗಳು ಕದಳೀಪುರಕ್ಕೊಂದು ಸಲ ಬಿಜಯಂಗೈದರು ಬೇರೆ ಬೇರೆ ಯಾದವರೆಲ್ಲರೂ ತಮ್ಮ ಬಿನ್ನತೆಗಳನ್ನು ಮರೆತು ಸ್ವಾಮಿಗಳ ಪಾದಸೇವೆಯನ್ನು ಮಾಡಿದರು, ಸಂದರ್ಶನ ಪಡೆದರು, ಅನುಗ್ರಹ ಸಂಪಾದಿಸಿದರು ಅಂದೇ ಸ್ವಾಮಿಗಳೆದುರಿಗೆ ತಾವೆಲ್ಲರೂ ಐಕ್ಯದಿಂದಿರುವೆವೆಂದು ಸಕಲರೂ ಪ್ರಮಾಣ ಮಾಡಿದರು. ರಾಯರೆಂದರೆ ಸ್ವಾಮಿಗಳಿಗೆ ಅಳೆಯಲಸಾಧ್ಯವಾದ ಪ್ರೇಮಾ-ದರಗಳು ! ನಿತ್ಯಾನಂದ ಸ್ವಾಮಿಗಳೇ ಸ್ವತಃ ರಾಯರ ಕರೆ ಇಲ್ಲದೆ ಕದಳೀಪುರಕ್ಕೆ ಬಂದು, ಅವರ ಮನೆಯಲ್ಲೇ ಕೆಲವು ದಿವಸಗಳ ವರೆಗೆ ತಂಗಿದರು !

ಊರಿಗೆ ಊರೇ ರಾಯರ ನಿಷ್ಕಲ್ಮಶ ಪ್ರೇಮಕ್ಕೆ ಮಾರುಹೋಯಿತು ಸೌಜನ್ಯದ ಮೂರ್ತಿಯಾದ ರಾಯರನ್ನು ಎಲ್ಲರೂ ಮುಕ್ತ ಕಂಠದಿಂದ ಹೊಗಳಿ ದರು ಎಲ್ಲರೂ ರಾಯರ ಹೆಸರೆತ್ತಿದಾಗಲೆಲ್ಲ– ರಾಯರ ಮನೆಯಲ್ಲೇ ನಾವು ಹುಟ್ಟಿ ಬೆಳೆದವರು ಅವರ ಹೆಂಡತಿ ಜಾನಕಿಯಮ್ಮನೇ ನಮ್ಮನ್ನು ಸಾಕಿ, ಸಲಹಿ ದೊಡ್ಡವರನ್ನಾಗಿ ಮಾಡಿದವರು. ಅವರಿಲ್ಲದಿದ ರೆ ನಮ್ಮ ಪಾಡೇನಾಗು

ತಿತ್ತೋ ಎಂದು ಹೇಳಿ ಆನಂದ ಬಾಷ್ಪಗಳನ್ನು ಸುರಿಸುತ್ತಿದ್ದರು ಸ್ವಾಮಿಗಳ ಆಗಮನದಿಂದ ಊರಿಗೆ ಊರೇ ಸಾತ್ವಿಕ ಮಾರ್ಗವನ್ನು ಅನುಸರಿಸುವಂತಾಯಿತು ಇದನ್ನು ಕಂಡು ರಾಯರು, 'ನನ್ನ ಬಾಳಿನ ಪಾತ್ರೆ ತುಂಬಲಿಲ್ಲ ಈಗ ಎಂಬತ್ತು ವರ್ಷ ನಡೆಯುತ್ತಿದೆ ಇನ್ನೂ ಏನೇನು ನೋಡಿ ಸಾಯಬೇಕೋ ಆ ಪರಮಾತ್ಮನೇ ಬಲ್ಲ' ಎಂದು ಉದ್ಗಾರ ತೆಗೆದರು

ಆ ಹಣ್ಣು ಶರೀರ ಎಷ್ಟು ಚಿರ ಚೇತನವುಳ್ಳದ್ದು ! ಪುಟ ನೆಗೆದ ಚೆಂಡು !

---

# ಎಲ್ಲವೂ ನಿನಗಾಗಿ !

ಆಕೆ ಹಣ್ಣು ಹಣ್ಣು ಮುದುಕಿ, ಇದ್ದ ಒಬ್ಬನೇ ಒಬ್ಬ ಗಂಡುಮಗ ಮೊನ್ನೆ ನಡೆದ ಪ್ರಪಂಚದ ದ್ವಿತೀಯಸಂಗ್ರಾಮದ ಕಾಲದಲ್ಲಿ ಸೈನ್ಯಖಾತೆಗೆ ಸೇರಿದ್ದನು ಮುದುಕಿಗೆ ಹಗಲೂ ರಾತ್ರಿಯೂ ಮಗನದೇ ಯೋಚನೆ ಸೈನಿಕರ ಜೀವನ ವೆಷ್ಟು-ಕಷ್ಟತರವೆಂದು ನೆನೆದಾಗ, ಆಕೆ ಹೊಟ್ಟೆಗೆ ಸರಿಯಾಗಿ ಅನ್ನ ತಿನ್ನುತಿದ್ದಿಲ್ಲ ಸೊಸೆ ಸುಶೀಲೆಯಂತೂ ಗಂಡ ಸುರಕ್ಷಿತವಾಗಿ ಮನೆಗೆ ತೆರಳಲೆಂದು ದಿನವೂ ದೇವಿಯಾರಾಧನೆ ನಡೆಯಿಸುತ್ತಿದ್ದಳು ನಾಕಷ್ಟು ಓದಿಯೂ ಸುಮ್ಮನೆ ಮನೆ-ಯಲ್ಲಿ ಕುಳ್ಳಿರುವುದಕ್ಕಿಂತ ಸೈನ್ಯಖಾತೆಗೆ ಸೇರಿದರೆ, ಅತ್ತ ದೇಶಸೇವೆ, ಇತ್ತ ಈಶಸೇವೆ (ಉದರ ಸೇವೆ) ಎರಡೂ ನಡೆಯುತ್ತದೆಂದು ವಸಂತ ಕುಮಾರನ ನಂಬಿಕೆ ಜನನಿ ಮತ್ತು ಜನ್ಮಭೂಮಿ ಮೀರಿ ಸ್ವರ್ಗವಿದೆಯೇ ? ಯುದ್ಧ ಕಾಲದಲ್ಲಿ ಆತ ಹತ್ತಾರು ದೇಶಗಳನ್ನು ತಿರುಗಿದ ತಾಯಿ ಅಥವಾ ಹೆಂಡತಿ ಹೆದರಿದಂತೆ ಅವನ ಜೀವಕ್ಕೆ ಮಾತ್ರ ಯಾವುದೇರೀತಿಯಲ್ಲಿ ಅಪಾಯ ಒದಗಲಿಲ್ಲ ವಿದೇಶ ದಿಂದ ಸ್ವದೇಶಕ್ಕೆ ಮರಳಿದೊಡನೆಯೇ ತಾನು ಸುರಕ್ಷಿತವಾಗಿ ಢಿಲ್ಲಿಗೆ ಬಂದು ತಲುಪಿರುವೆನೆಂದೂ, ತನ್ನ ಬಗ್ಗೆ ಏನೂ ಯೋಚಿಸಬೇಕಾಗಿಲ್ಲವೆಂದೂ, ತಿಂಗಳು ತಿಂಗಳ ಖರ್ಚಿಗೆ ಹಣ ಕಳುಹಿಸುವೆನೆಂದೂ ಹೆಂಡತಿಯಾದ ಮುದ್ದು ಸುಶೀಲೆಗೆ ಪತ್ರ ಬರೆದನು ಆದರೆ ಆ ಪತ್ರದಿಂದ ಇನ್ನೂ ಪ್ರಥಮ ಪ್ರೇಮ ಪರಿಚಯ ವಾಗದ ಅವಳಿಗೆ ಹೇಗೆ ಸಮಾಧಾನವಾದೀತು ? ತಾಯಿಯಂತೂ ಯಾವಾಗ ಮಗನನ್ನು ನೋಡಿಯೇನೆಂದು ಸದಾ ಕನವರಿಸುತ್ತಿದ್ದಳು ವಸಂತಕುಮಾರ ಢಿಲ್ಲಿಗೆ ಬಂದ ತರುಣದಲ್ಲೇನೋ ಊರಿಗೆ ಪತ್ರಬರೆದನು ಆ ಮೇಲೆ ಸುಶೀಲೆಯು ಅವನ ವಿಳಾಸಕ್ಕೆ ಹತ್ತಾರು ಪತ್ರಗಳನ್ನು ಬರೆದರೂ ಅವು ಅವನ ಕೈಗೆ ತಲುಪದೇ ಮರಳಿ ಅವಳ ಕೈಗೇ ಸೇರುತ್ತಿದ್ದವು

ಯುದ್ಧ ಮುಗಿದೊಡನೆಯೇ ನಮ್ಮ ದೇಶಕ್ಕೆ ಸ್ವಾತಂತ್ರ್ಯಪ್ರಾಪ್ತಿಸಿತು ಆದರೆ ಇದರ ಗರ್ಭದಲ್ಲಿ ಅಡಗಿಕೊಂಡಿದ್ದ ಇತರ ಭೂತ ಪಿಶಾಚಿಗಳ, ಮೃತ್ಯು ದೇವತೆಯ ತಾಂಡವನೃತ್ಯವೇ ಆರಂಭವಾಗಿ ದೇಶದಲ್ಲಿ ಹಾಹಾಕಾರವೆದ್ದಿತು ಇಂತಹ ಸ್ವಾತಂತ್ರ್ಯಲಭಿಸದಿದ್ದರೆ ಏನು ಕೆಟ್ಟುಹೋಗಿತ್ತು ? ನಾವು ಮೊದಲೇ ಸುಖದಿಂದಿದ್ದೆವು. ಇಷ್ಟಲ್ಲದೆ ಅಖಂಡ ಹಿಂದುಸ್ಥಾನವನ್ನು ಇಬ್ಭಾಗ ಮಾಡಿ

ಹಂಚಿ ಮುಸ್ಲಿಮರ ಕೃಪೆಯನ್ನೇಕೆ ಯಾಚಿಸಬೇಕಿತ್ತು ? ರಾಜಕೀಯ ಮುತ್ಸದ್ಧಿಗಳು ತಮ್ಮ ಗೋರಿಯನ್ನು ತಾವು ಕಟ್ಟಿಕೊಂಡುದಲ್ಲದೆ, ಇತರರ ನಾವಿಗೂ ಕಾರಣರಾದರು, ಎಂದು ಜನ ಆಡಿಕೊಳ್ಳಲಾರಂಭಿಸಿದರು ಕಲ್ಕತ್ತೆ, ಹೈದರಾಬಾದು ಮೊದಲಾದ ಕಡೆಗಳಲ್ಲಿ ಕೋಮುವಾರು ವಿಷಜ್ವಾಲೆ ಹರಡಿ, ಹಿಂದುಗಳ ಷಿಕಾರಿ ನಡೆಯಿತು ಹೆಂಗಸರ ಮಾರಾಟವಾಯಿತು ಕೊಲೆ ಸುಲಿಗೆಗಳು ನಿಯಮಬದ್ಧವಾದವು ಈ ಕೋಮುವಾರು ಜ್ವಾಲೆಯಲ್ಲಿ ಬಿದ್ದವರು- ಯಾರು ಸತ್ತರು, ಯಾರು ಬದುಕಿದರು-ಎಂಬ ನಿಜವಾದ ಲೆಖ್ಖ ಹೇಗೆ ದೊರಕಲು ಸಾಧ್ಯ?

ವಸಂತಕುಮಾರನ ತಾಯಿಗೆ ಈಗ ಮಾತ್ರ ದಿಗಿಲು ಹತ್ತಿಕೊಳ್ಳದೆ ಇರಲಿಲ್ಲ ಸುಶೀಲೆಯಂತೂ ಹಗಲಿರುಳೂ ಯೋಚನಾಮಗ್ನಳಾದಳು ದಿನದಿನವೂ ಕೆಟ್ಟ ಸುದ್ದಿ ಹರಡುವ ಈಗಿನ ಕಾಲದಲ್ಲಿ ವಸಂತ ಕುಮಾರನು ಜೀವದಿಂದ ಉಳಿದಿದ್ದಾನೆಂಬುದಕ್ಕೆ ಆಧಾರವೇನು ? ಮೊದಲು ಪತ್ರ ಬರೆಯುತ್ತಿದ್ದ ಆತನು ಈಗ ಎರಡು ಮೂರು ವರ್ಷಗಳಿಂದಲೂ ತನ್ನ ಸುಳಿವನ್ನು ಕೂಡ ಕೊಡದೆ ಸುಮ್ಮನಿರುತ್ತಿದ್ದನೆ ? ಈ ಹಳ್ಳಿಯ ಮುದುಕಿಗೆ ಢಿಳ್ಳಿಯಿಂದ ವರ್ತಮಾನ ತರುವವರು ಯಾರು ? ಹೆಚ್ಚೆಂದರೆ ವರ್ಷಕ್ಕೊಮ್ಮೆ ಮಗನಿಂದ ಪತ್ರಬರಬೇಕಾಗಿತ್ತು ಈಗ ಅದು ಇಲ್ಲ

ಆತ ಕಾಶ್ಮೀರಕ್ಕೆ ಹೋದವನು ಅಲ್ಲೇ ಇದ್ದನು ಪಾಕಿಸ್ಥಾನಿಗಳೊಡನೆ ಶೌರ್ಯದಿಂದ ಹೋರಾಡಿ, ಮೇಜರ್, ಕಮಾಂಡರ್ ಮೊದಲಾದ ಹಿರಿಯ ಅಧಿಕಾರಿಗಳ ಕೃಪೆಗೆ ಪಾತ್ರನಾಗಿದ್ದನು ಹಿಂದೂಸ್ಥಾನದ ನಂದನ ವನವಾದ ಕಾಶ್ಮೀರವು ಎಲ್ಲಿ ಪಾಕಿಸ್ಥಾನಕ್ಕೆ ಸೇರಿಬಿಡುತ್ತದೆಯೋ ಎಂದು ಆತನ ದುಗುಡ ಸೇರಿದರೇನುಗತಿಯೆಂದು ಹಗಲಿರುಳೂ ಚಿಂತೆ ಆತನಿಗೆ ! ಕಾಶ್ಮೀರ ಸಮಿತಿ, ನಿಮಿಟ್ಸ್, ಮೆಕ್ನಾಟನ್, ಡಿಕ್ಸನ್, ಫ್ರಾಂಕ್‌ಗ್ರಹಾಂ— ಯಾರೂ ಏನನ್ನೂ ಮಾಡಲು ಸಾಧ್ಯವಿಲ್ಲ ಜನಮತಗಣನೆ (Plebisite) ಕೂಡ ನಿಷ್ಪ್ರಯೋಜನ ಕಾಶ್ಮೀರದ ಜನರೇ ತಮ್ಮ ಭವಿಷ್ಯವನ್ನು ನಿರ್ಧರಿಸಿಕೊಳ್ಳಬೇಕೆಂದೂ, ಕಾಶ್ಮೀರಿಗಳು ಸುಖದಿಂದಿರಬೇಕಾದರೆ ಹಿಂದೂಸ್ಥಾನದಲ್ಲಿಯೇ ಸೇರ್ಪಡೆಯಾಗುವುದು ಉತ್ತಮವೆಂದೂ ಆತನಿಗೆ ಎನಿಸಿತ್ತು

. ಸೈನ್ಯಪಾತೆಗೆ ಮೊಟ್ಟಮೊದಲು ಸೇರುವ ದಿನ ಆ ಮುದಿತಾಯಿಯ ಚರಣಾರವಿಂದಗಳಿಗೆ ಬಿದ್ದು ನಮಸ್ಕರಿಸಿ, ಆಕೆಯ ಅನುಗ್ರಹವನ್ನು ಸಂಪಾದಿಸಿ ಹೊರಹೊರಟಿದ್ದನು. ತಾಯಿಯ ಕರುಳುಬಳ್ಳಿ ಎಂದಾದರೂ ಒಣಗುವುದುಂಟೇ ?

ಊರಿಗೆ ವಸಂತಕುಮಾರ ಬರುವನಂತೆ ಈ ಸುದ್ದಿ ಊರಿನಲ್ಲಿ ಹೇಗೆ ಹರಡಿತೋ ಆ ಪರಮಾತ್ಮನೇ ಬಲ್ಲ ತಾಯಿಗೆ ಹೊಸದಾಗಿ ತಾರುಣ್ಯ ಬಂದಂತಾಗಿ ಇನ್ನೂ ನಾಲ್ಕುಕಾಲ ಬಾಳಿಯೇನೆಂಬ ಹುಮ್ಮಸ್ಸು ಹುಟ್ಟಿತು ದಿನವೂ ರೈಲ್ವೆ ನಿಲ್ದಾಣಕ್ಕೆ ಭೆಟ್ಟಿಕೊಡುವ ಕೆಲಸ ಬಿತ್ತು ಮುದುಕಿಗೆ ಗಂಡನು ಯಾವಾಗಬರುವನೆಂದು ಕನಸಿನಲ್ಲಿ ಸದಾ ಕನವರಿಸುವ ಸುಶೀಲೆಗೆ ಕುಂಕುಮದ ಭಾಗ್ಯದಲ್ಲಿ ನಂಬಿಕೆ ಹುಟ್ಟಿತು

ಮುದುಕಿ ರೈಲ್ವೆ ನಿಲ್ದಾಣದಲ್ಲಿ ಬರಹೋಗುವ ಪ್ರತಿಯೊಂದು ಗಾಡಿಯನ್ನೂ ನೋಡುತಿದ್ದಳು ಒಂದು ದಿನ ಮೆಯಿಲ್‌ಗಾಡಿಯಲ್ಲಿ ವಸಂತ ಕುಮಾರ ಬಂದೇಬಿಟ್ಟನು ಗಾಡಿ ಬಂದೊಡನೆ ನಿಲ್ದಾಣದಲ್ಲಿಯೇ ಮಗನನ್ನು ಕಣ್ಣು ತುಂಬಾ ನೋಡಬೇಕೆಂದು ಆತುರ ಆಕೆಗೆ ಆದರೆ ಪ್ಲಾಟ್‌ಫಾರ್ಮ್ ಟಿಕೆಟ್ ಒಂದು ಬೇರೆ ಇದೆಯಲ್ಲ ದೂರದ ಒಂದು ಮೂಲೆಯಲ್ಲಿ ಕಾಯುತಿದ್ದ ತಾಯಿ ಮಗನ ಗುರುತನ್ನು ತಕ್ಷಣವೇ ಹಿಡಿದಳು 'ವಸಂತಾ, ಬಾರಪ್ಪಾ ಕೊನೆಗೂ ಊರಿಗೆ ಬಂದೆಯಲ್ಲಾ ಒಂದು ಪತ್ರವನ್ನಾದರೂ ನನಗಲ್ಲದಿದ್ದರೆ ನಿನ್ನ ಹೆಂಡತಿಗಾದರೂ ಬರೆಯಬಹುದಿತ್ತಲ್ಲ ನಮ್ಮಂತಹ ಹಳಬರ ನೆನಪೆಲ್ಲಿ ಉಂಟಾ-ಗುತ್ತದೆ ನಿಮಗೆ ? ' ಎನ್ನುತ್ತ ಆತನ ಮೈದಡವಿದಳು ಆತ ನೇರವಾಗಿ ಮನೆಗೆ ಹೋದನು ಸುಶೀಲೆ ಮೈತುಂಬಿಕೊಂಡು ಎಷ್ಟು ಎತ್ತರವಾಗಿ ಬೆಳೆದಿದ್ದಾಳೆ ! ಸೌಂದರ್ಯ ಸೌಜನ್ಯಗಳೆರಡೂ ಆಕೆಯಲ್ಲಿ ಮನೆ ಮಾಡಿ ಕೊಂಡಿವೆ ಗಂಡ ಮನೆಗೆ ಬಂದಾಕ್ಷಣ ಆತನೊಡನೆ ಏನು ಮಾತನಾಡ ಬೇಕೆಂಬುದೇ ತಿಳಿಯದೆ ಕ್ಷಣಹೊತ್ತು ಮೌನಮುದ್ರೆಯನ್ನು ತಳೆದಿದ್ದಳು ಆದರೆ ಆಕೆಯ ಮನೋಮಂದಿರ ಮಾತ್ರ ಆನಂದದ ಅಂಬುಧಿಯಿಂದ ಆವೃತವಾಗಿತ್ತು ಕಮಲದ ನಾಳಗಳಂತಿರುವ ಆಕೆಯ ಎಳೆಯಕೈಗಳಿಂದ ಆಗ ತಾನೇ ತಯಾರಿಸಿದ ಉಪ್ಪಿಟ್ಟು, ಕೇಸರೀಭಾತ್ ತಿಂದು ಟೀ ಕುಡಿದನು ನಂತರ ಸುಶೀಲೆ ಆತ ಮನೆಗೆ ತಂದ ಸಾಮಾನುಗಳ ಶೋಧನೆ ನಡೆಯಿಸಿದಳು ಹತ್ತಾರುತರಹದ ಸೀರೆ, ಕನ್ನಡಿ, ಬಾಚಣಿಗೆ, ರಿಬ್ಬನ್, ಪೌಡರ್, ಸ್ನೋ ಅಲ್ಲದೆ ಇನ್ನೂ ಬೇರೆ ಬೇರೆ ಸಾಮಾನುಗಳಿದ್ದವು ತಾಯಿಗೂ ಸೀರೆಗಳಿದ್ದವು

* * * *

ಆತ ದಿಲ್ಲಿಯಲ್ಲಿದ್ದ ಅಷ್ಟು ಅವಧಿಯಲ್ಲಿಯೂ ಆತನ ಎಲ್ಲಾ ಸ್ನೇಹಿತರೂ ಆತನನ್ನು 'ನಿಮಗೆ ಮದುವೆಯಾಗಿದೆಯೇನ್ರೀ. ಮಿಸ್ಟರ್ ವಸಂತ್? ಹೆಂಡತಿ

ಎಲ್ಲಿದ್ದಾಳೆ ? ಆಕೆಯ ಹೆಸರೇನು ? ಎಂದು ಎಡೆಬಿಡದೆ ಸದಾ ಕೇಳುತ್ತಿದ್ದರು ಯಾರೇ ಆಗಲಿ, ಎಷ್ಟೇ ಸುಖ ಪಡುವದಿದ್ದರೂ ಗೃಹಸ್ಥಾಶ್ರಮದಲ್ಲಲ್ಲದೆ ಇನ್ನೊಂದರಲ್ಲಿಲ್ಲವೆಂದು ಆತನು ಮನಗಂಡನು ಮನೆ ಮಠ, ಹೆಂಡತಿ ಮಕ್ಕಳೆಲ್ಲವೂ ಮಾಯೆಯೆಂದು ಅದನ್ನು ದೂರಕ್ಕೆ ತಳ್ಳಿಬಿಡುವ ಕೆಲವು ಜನರ ಮನೋಭಾವವನ್ನು ನೆನೆದರಂತೂ ನಮಗೆ ನಿಜವಾಗಿಯೂ ನಗೆ ಬರದಿರದು ಯಾವುದರಲ್ಲಿಯೂ ಪ್ರಕೃತಿಯೇ ಮೇಲಲ್ಲವೇ? ಹೆಂಗಸಿನ ವರ್ಚಸ್ಸಿದ್ದರೆ ಯಾವ ಕೆಲಸವೂ ಕಷ್ಟವಲ್ಲ ಅಂತಹ ಹೆಂಗೆಳೆಯರನ್ನು ತ್ಯಜಿಸಿ ಮಾನವ ಪ್ರಾಣಿ ಬದುಕುವುದು ಸಾಧ್ಯವೇ ? ವಸಂತಕುಮಾರ ಹೀಗೆಲ್ಲ ಯೋಚಿಸಿ 'ಗಂಡನ ಸುಖ ಹೆಂಡತಿಯ ಕೈಯಲ್ಲಿ'ದೆಯೆಂದು ದೃಢನಾಗಿ ನಂಬಿ, ಸೈನ್ಯ ಖಾತೆಯಲ್ಲಿದ್ದ ಕೆಲಸವನ್ನು ಬಿಟ್ಟು ಮನೆಯ ದಾರಿಯನ್ನು ಹಿಡಿದಿದ್ದನು ಅವನಲ್ಲಿಯ ಈ ಮಾನಸಿಕ ಬದಲಾವಣೆಯು ಸುಶೀಲೆಯ ದೈವ ಚಿಂತನದ ಪ್ರಭಾವವೆಂದು ಹೇಳೋಣವೇ ? ಇದ್ದರೂ ಇರಬಹುದು ಸ್ತ್ರೀಯ ಶಕ್ತಿ ಅಪಾರವಾದುದು ! ಏ ಹೆಂಗಸೆ, ನೀನೇ ಧನ್ಯೆ, ಮಾನ್ಯೆ, ಗುಣಶೀಲೆ !

* * * *

ಸುಶೀಲೆ ಕೇಳಿದಳು, 'ಇಷ್ಟು ಕುಪ್ಪಸ ಸೀರೆಗಳೆಲ್ಲ ಯಾರಿಗಾಗಿ ?'

'ಎಲ್ಲವೂ ನಿನಗಾಗಿ' ಈ ಪ್ರಪಂಚದಲ್ಲಿ ನಮ್ಮ ಗಂಡಸರ ಜಾತಿ ಬದುಕುವುದು, ಬಾಳುವುದು ಎಲ್ಲವೂ ಹೆಂಗಸರಿಗಾಗಿ, ಸ್ತ್ರೀಯೊಂದು ರತ್ನ ! ಸ್ತ್ರೀಯೊಂದು ನಿಧಿ ! ಕಾಮಿನೀ ಕಾಂಚನಗಳೆರಡನ್ನು ಬಿಟ್ಟು ಮನುಷ್ಯನಾದವನು ಬಾಳ್ವೆ ನಡೆಯಿಸಲಾರನು ಆದುದರಿಂದ, ಸುಶೀಲೆ, ನಿನ್ನನ್ನು ಬಿಟ್ಟು ನಾನು ಖಂಡಿತವಾಗಿ ಬದುಕಲಾರೆನೆಂದು ದೃಢವಾಗಿ ನಂಬಿದ್ದೇನೆ ತಾಯಿಯ ವಿಷಯದಲ್ಲೂ ಕೂಡ ಇದೇ ಮಾತು ಅನ್ವಯಿಸುವುದು ಮಕ್ಕಳ ವಾತ್ಸಲ್ಯದ ಬಳ್ಳಿಯನ್ನು ಕಡಿದುಕೊಂಡು ಯಾವ ತಾಯಿಯೂ ಬದುಕಲಾರಳು ತಾಯಿಯ ಕರುಳನ್ನು ಕತ್ತರಿಸಿ ಮಕ್ಕಳು ನೆಮ್ಮದಿಯಿಂದ ಬದುಕಲಾರರು' ಎಂದನು

'ಎಲ್ಲವೂ ನಿನಗಾಗಿ' ಎಂದ ಗಂಡನ ಮಾತಿನಲ್ಲಿ ಎಷ್ಟೊಂದು ಅರ್ಥವಿದೆ ಯೆಂದು ತಿಳಿದು ಸುಶೀಲೆ ನಿಜವಾಗಿಯೂ ಸಂತೋಷದ ಪರಮಾವಧಿಯನ್ನು ಮುಟ್ಟಿದಳು. ತಾಯಿ, 'ಮಗೂ, ದೇವರು ನಿನಗೆ ಯಾವಾಗಲೂ ಇಂತಹ ಸದ್ಬುದ್ಧಿಯನ್ನೇ ಕೊಡಲಿ' ಎಂದು ಆಶೀರ್ವದಿಸಿದಳು ಹೃತ್ಪೂರ್ವಕವಾಗಿ

ತಾಯಿ, ಮಗ ಸೊಸೆ ಮೂವರೂ ಒಂದು ಕಮನೀಯ ಪ್ರೇಮದ ಐಕ್ಯಗಾನದಲ್ಲಿ ಕೂಡಿದರು.

# ಮುಗಿದ ಲೇಖನ

ಆತನೊಬ್ಬ ತರುಣ ಸಾಹಿತಿ ಮತ್ತು ಕವಿ  ಹಿರಿಯ ಸಾಹಿತಿಗಳಾದವರ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿ, ಮನನ ಮಾಡಿದ್ದನು  ಸಾಹಿತ್ಯೋಪಾಸನೆಯನ್ನು ಬಿಟ್ಟು ಆತ ಜೀವಿಸಲಾರ  ಆತನ ತಂದೆಗೆ ಮಗನ ಅಭಿರುಚಿಯಲ್ಲಿ ಲೇಶವೂ ಆಸಕ್ತಿ ಇರಲಿಲ್ಲ  ಸಾವಿರಾರು ರೂಪಾಯಿ ಖರ್ಚು ಮಾಡಿ, ಮಗನಿಗೆ ಓದಿಸಿದ ಆತ ಅವನಿಗೆ ಮದುವೆ ಮಾಡಿಸಿ ಹೆಣ್ಣಿನ ಕಡೆಯಿಂದ ವರದಕ್ಷಿಣೆಯ ರೂಪದಲ್ಲಿ ಸದ್ರಿ ಶಿಕ್ಷಣದ ವೆಚ್ಚ ವಸೂಲ ಮಾಡಬೇಕೆಂದು ಮೊದಲೇ ನಿರ್ಧರಿಸಿದ್ದನು  ಕಾಳಿಂಗರಾಯರು ಆಗರ್ಭ ಶ್ರೀಮಂತರು  ಅವರಿಗೆ ಗಂಡು ಸಂತಾನವೇ ಇರಲಿಲ್ಲ  ಐದು ಹೆಣ್ಣುಮಕ್ಕಳ ಪೈಕಿ ಮುಕ್ತಾ ಮದುವೆಗೆ ನೆರೆದಿದ್ದಳು

ನಮ್ಮ ತರುಣ ಸಾಹಿತಿಯಾದ ರಮಾನಾಥನಿಗೇ ಮುಕ್ತಾಬಾಯಿಯನ್ನು ಕೊಟ್ಟು ಮದುವೆ ಮಾಡಬೇಕೆಂದು ಕಾಳಿಂಗರಾಯರ ಇಚ್ಛೆ ಇತ್ತು  ಆತನ ಗುಣ ನಡತೆಗಳನ್ನು ನೆನೆದರೆ, ಮುಕ್ತೆಗೆ ಅವನು ತುಂಬಾ ಯೋಗ್ಯನೆಂದು ಕಂಡುಬಂತು  ಆಕೆಗೂ ರಮಾನಾಥನದೇ ಧ್ಯಾನ ಮೊದಲಿನಿಂದಲೂ ಸದಾ ನಡೆದಿತ್ತು  ಹಿರಿಯ ಮಗಳ ಮದುವೆಗೆ ಕಾಳಿಂಗರಾಯರು ಹಣವನ್ನು ನೀರಿನಂತೆ ವೆಚ್ಚ ಮಾಡಿದರು  ಐದು ಸಾವಿರವೋ ಹತ್ತು ಸಾವಿರವೋ ವರದಕ್ಷಿಣೆ ಕೊಟ್ಟರು ರಮಾನಾಥನಿಗೆ  ಹೆಣ್ಣಿಗೂ ತನಗೂ ಮದುವೆಯಲ್ಲ. ಹೆಣ್ಣಿಗೂ ಹಣಕ್ಕೂ ಮದುವೆಯೆಂದು ಅವನು ಅಂದೇ ತರ್ಕಿಸಿಬಿಟ್ಟನು  ತಂದೆಯ ಜಿಪುಣತನ, ಅತ್ಯಾಸೆಯನ್ನು ನೋಡಿ, 'ಇಂತಹ ಜನರನ್ನು ದೇವರೇ ಕಾಪಾಡಬೇಕು' ಎಂದು ಉದ್ಗರಿಸಿದನು  ಅವನು ಸರ್ಕಾರಿ ನೌಕರಿಯನ್ನು ಸಂಪಾದಿಸಿ ಜೀವಿಸಬೇಕಾಗಿಯೂ ಇರಲಿಲ್ಲ  ಎಲ್ಲರೂ ಓದುವಂತೆ ಅವನೂ ಎಂ ಎ  ಪರೀಕ್ಷೆಯ ವರೆಗೆ ಓದಿ, ಡಿಗ್ರಿ ಸಂಪಾದಿಸಿದ್ದ  ಮುಕ್ತಾಕೂಡ ಇಂಟರ್ ತರಗತಿಯ ವರೆಗೆ ಓದಿದವಳು. ಇಬ್ಬರ ದಾಂಪತ್ಯ ಜೀವನವೂ ಸುಖಮಯವಾಗಿ ಸಾಗಬಹುದೆಂಬ ಆಸೆ ಇತ್ತು  ಮದುವೆಯಾದ ಕೆಲವೇ ದಿನಗಳಲ್ಲಿ ಆಕೆ ಗಂಡನನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಬಯಸಿದಳು. ಆದರೆ ಆತನ ಅಭಿರುಚಿ

ಯಲ್ಲಿ ಆಕೆಗೆ ಎಳ್ಳಷ್ಟೂ ಆಸಕ್ತಿ ಇರಲಿಲ್ಲ 'ಪ್ರೇಮ, ಪ್ರೇಮ' ಎಂದು ತಲೆ ನೋಯಿಸಿಕೊಂಡು, ಶೃಂಗಾರ ರಸ ಭರಿತವಾದ ಕಾದಂಬರಿಗಳನ್ನು ಬರೆಯುವ ವರಿಗೆ—ಮನೆಯಲ್ಲಿರುವ ಮದುವೆಯಾದ ಹೆಂಡತಿಯೊಡನೆ ಪ್ರೇಮದಿಂದ ವರ್ತಿಸು ವುದು ಹೇಗೆಂದು ತಿಳಿಯದ ತರುಣಸಾಹಿತಿಗಳಿಂದ ಲೋಕಕ್ಕೇನು ಉಪಯೋಗ ವಾದೀತು ?" ಅವಳ ವಾದ ಸರಣಿ ರಮಾನಾಥನಿಗೆ ಹೆಂಡತಿಯಲ್ಲಿ ಅಪಾರ ಪ್ರೇಮವಿತ್ತು ಆದರೆ ತನ್ನ ಕೈಗೊಂಬೆಯಾಗಿ ಮಾತ್ರ ಆದ್ದರಿಂದಾದ ಕೊನೆ ಕೊನೆಗೆ ಅವಳಿಗೆ ತನ್ನ ಅಭಿರುಚಿಯಲ್ಲಿ ಆಸಕ್ತಿ ಇಲ್ಲವೆಂದು ಕಂಡುಕೊಂಡನು ತನ್ನ ಯೋಗ್ಯತೆಗೆ ಅರ್ಹಳಾದ ಹೆಣ್ಣಲ್ಲವಾಕೆಯೆಂದು ತೀರ್ಮಾನಕ್ಕೆ ಇಳಿದನು ಆತ ಯಾವುದಾದರೂ ಲೇಖನ ಬರೆಯುತಿದ್ದಾಗ, ಮುಕ್ತೆ ಕಂಡು ಮುಖ ಮುರಿಯುತಿದ್ದಳು ಅವಳಿಂದಾಗುತ್ತಿರುವ ಕಿರುಕುಳವನ್ನು ಆತ ತಾಳ್ಮೆ ಯಿಂದ ಸಹಿಸಿಕೊಳ್ಳುತಿದ್ದನು ಅವರಿಬ್ಬರೊಳಗಿನ ಜಗ್ಗಾಟವೇತಕ್ಕಾಗಿದೆಯೆಂದು ಇತರರಾರೂ ಊಹಿಸಲಾರರು

* * * *

ಸುಮತಿಬಾಯಿ ರಮಾನಾಥನ ಸಹಪಾಠಿ ಆಕೆ ಬಿ ಎ ವರೆಗೆ ಓದಿದ-ವಳು ಹತ್ತಾರು ಪತ್ರಿಕೆಗಳಲ್ಲಿ ರಮಾನಾಥನಿಂದ ಬರೆದು ಪ್ರಕಟವಾದ ಲೇಖನ ಗಳನ್ನು ತೀವ್ರ ಆಸಕ್ತಿಯಿಂದ ಓದುತಿದ್ದಳಾಕೆ ಆಕೆಯೂ ಸಾಹಿತ್ಯ ಸರಸ್ವತಿ ಅವಳ ಅಭಿರುಚಿಗೆ ಅನುಗುಣವಾಗಿ ನಡೆದುಕೊಂಡು ಹೋಗುವವನನ್ನೇ ಮದುವೆಯಾಗಲು ನಿರ್ಧಾರ ಮಾಡಿದ್ದಳಾಕೆ ಅವಳಿಗೆ ಮನೆಯಲ್ಲಿ ಸ್ವತಂತ್ರ ವಾತಾವರಣವಿತ್ತು ಆಕೆಯ ಅಣ್ಣ ಸರ್ವೋದಯ ಕಾಲೇಜ್‌ನಲ್ಲಿ ಸಂಸ್ಕೃತದ ಪ್ರೊಫೆಸರ್ ಆತನೇ ಅವಳಿಗೆ ಪ್ರೌಢ ಶಿಕ್ಷಣ ಕೊಡಿಸಿದ್ದನು ಮನೆಯಲ್ಲಿ ಆಕೆಯ ಇಚ್ಛೆಗೆ ವಿರೋಧವಾಗಿ ಯಾರೂ ವರ್ತಿಸುತಿರಲಿಲ್ಲ ಅವಳೂ ಆಗಾಗ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು, ಮಹಿಳೆಯರ ಆತ್ಮೋನ್ನತಿಯನ್ನು ಜಾಗೃತಗೊಳಿಸುತ್ತಿದ್ದಳು ತನ್ನ ಮನೋಮಂದಿರದಲ್ಲಿ ರಮಾನಾಥನಿಗೆ ಮೂರ್ತಿ ಪೂಜೆ ಸಲ್ಲಿಸಿದ್ದಳು ತಂದೆಯ ಹಣದ ಮೇಲಿನ ವ್ಯಾಮೋಹ ತನ್ನ ಭವಿಷ್ಯವನ್ನೇ ಹಾಳು ಮಾಡಿ, ತನಗೆ ಸಲ್ಲದ ಹೆಣ್ಣನ್ನು ತಂದು ಮನೆ ತುಂಬಿಸಿ ಕೊಂಡಿತೆಂದು ಆಕೆಗೆ ಅವನು ಈ ಮೊದಲೇ ಪತ್ರ ಬರೆದಿದ್ದನು ಸುಮತಿ-ಬಾಯಿಗೆ ಈ ಪತ್ರ ನಿರುತ್ಸಾಹ ಹುಟ್ಟಿಸಿದರೂ ಆತನಲ್ಲಿದ್ದ ಅನುರಾಗ ಮಾತ್ರ

ಕಡಿಮೆಯಾಗಲಿಲ್ಲ ಗೌರವಸ್ಥರ ಮನೆತನದಲ್ಲಿ ಹುಟ್ಟಿದ ರಮಾನಾಥನು ಕೈ ಹಿಡಿದ ಹೆಂಡತಿಯಲ್ಲಿ ನೆಟ್ಟಿದ್ದ ಪ್ರೇಮವನ್ನು ಸುಮತಿಬಾಯಿಗೆ ಹಂಚಲಾರನು. ಹೇಗೂ ಪಾಲಿಗೆ ಬಂದದ್ದು ಪಂಚಾಮೃತವೆಂದು ಮನಸ್ಸಿಲ್ಲದ ಮನಸ್ಸಿನಿಂದ ಮುಕ್ತಾಬಾಯಿಯೊಡನೆ ಸಂಸಾರ ಸಾಗಿಸಲಾರಂಭಿಸಿದನು

ಗಂಡ ಏನನ್ನಾದರೂ ಬರೆಯುತಿದ್ದಾಗ ಮುಕ್ತೆಗೆ ಸಹಿಸಲಾರದ ಸಿಟ್ಟು ಬೆಳಗಿನಿಂದ ಸಂಜೆಯವರೆಗೂ ಬರೆದು, ಹಣ ಸಂಪಾದಿಸಿದರೆ– ಆ ರಾಸಿ ಯನ್ನಿಡಲಿಕ್ಕೆ ಹೊಸ ಟ್ರೆಜರಿಯನ್ನೇ ಕೊಂಡುಕೊಳ್ಳಬೇಕಾದೀತು ಅಥವಾ ಯಾವ ಮೋಹನಾಂಗಿಯನ್ನು ಮೆಚ್ಚಿಸಲಿಕ್ಕೆ ಈ ಲೇಖನಗಳು ! ಎಂದು ಗಂಡನನ್ನು ಕೇಳಿ ಪ್ರತೀಸಲವೂ ಹಂಗಿಸಿ, ಭಂಗಿಸುತಿದ್ದಳು ರಮಾನಾಥನು ಸ್ವಭಾವದಿಂದ ತಾಳ್ಮೆಯುಳ್ಳವನಾಗಿದ್ದನು ತುಂಬಿದ ಕೊಡ ತುಳುಕುವುದಿಲ್ಲ ವೆಂಬ ಮಾತು ಆತನ ವಿಷಯದಲ್ಲಿ ಸತ್ಯವಾಗಿತ್ತು ಆಕೆಗೆ ಹತ್ತು ಸಲ ಸಿಟ್ಟು ಬಂದರೂ ಆತನು ನಯವಾದ ಮಾತುಗಳಿಂದಲೇ ಅವಳನ್ನು ಸಮಾಧಾನಪಡಿಸು ತಿದ್ದನು ಅವನಿಗೆ ಕೋಪಮಾಡಬೇಕೆಂದರೆ ಹೇಗೆಂದು ತಿಳಿಯದು 'ಎಷ್ಟೋ ಸಲ ಪತ್ರಿಕೆಗಳಲ್ಲಿ ಅಚ್ಚಾಗಬೇಕೆಂದು ಅವನು ಬರೆದಿಟ್ಟ ಲೇಖನಗಳನ್ನು ಮುಕ್ತಾಬಾಯಿ ಚೂರುಮಾಡಿ ಕಸದ ಬುಟ್ಟಿಗೆ ಎಸೆದಿದ್ದಳು ರಮಾನಾಥನು ಸುಮ್ಮನಿದ್ದು ಬಿಟ್ಟನು

ಒಂದು ಸಲ, 'ಬೆಳೆ ತುಂಬಿತು' ಎಂಬ ಸಾಮಾಜಿಕ ನಾಟಕವನ್ನು ಬರೆಯಲು ವಿಷಯಗಳನ್ನು ರೂಪಿಸಿ ಗುರುತಿಸಿಟ್ಟಿದ್ದನು ಆ ವಿಷಯಗಳ ಸಮೂಹವನ್ನು ವರ್ಣಮಾಲೆಯಾಗಿ ಪೋಣಿಸಿ, ಅಂಕ ಪ್ರವೇಶಗಳನ್ನು ಸೂಚಿಸಿ, ಸಂಗೀತದಪದಗಳನ್ನು ಜೋಡಿಸಿ, ಬರೆಯುವ ಕೆಲಸ ಮಾತ್ರ ಬಾಕಿ ಉಳಿದಿತ್ತು. ಆ ನಾಟಕ ಬರೆದು ಪ್ರಕಟವಾದಾಗ, ರಂಗಭೂಮಿಯಲ್ಲಿ ಅದೊಂದು ಶ್ರೇಷ್ಠ ತರಗತಿಯ ನಾಟಕವೆಂದು ಹೆಸರಾಗಿ ಅಮೋಘವಾದ ಪ್ರದರ್ಶನಗಳ ಯಶಸ್ವೀಪ್ರಯೋಗ ನಡೆಯುವುದಿದೆ ಅಷ್ಟು ಸೊಗಸಾದ ವರ್ಣನೆಗಳಿಂದ ತುಂಬಿ ತುಳುಕುವ ರಸಭರಿತವಾದ ಸಂಗೀತ ನಾಟಕವನ್ನು ಹಿಂದೆ ಯಾರೂ ಬರೆಯಲಿಲ್ಲ ಮುಂದೆ ಬರೆಯಲಾರರು– ಎಂಬ ಶ್ರೇಣಿಗೆ ಆತನ ಕಲ್ಪನಾ ತರಂಗಗಳು ಎದ್ದವು ಅದು ಬರೆದು ಮುಗಿದ ನಂತರ ಆ ನಾಟಕವನ್ನಾಡಲು ಯೋಗ್ಯರಾದ ನಟರನ್ನಾರಿಸಿ, ಗಾಯನ, ವಾದನ, ನರ್ತನ

ಗಳಲ್ಲಿ ಯೋಗ್ಯ ಶಿಕ್ಷಣ ಕೊಟ್ಟು, ನಾಟ್ಯಕಲಾ ವೈಭವವನ್ನು ಸಾವಿರಾರು ಜನರಿಗೆ ತೋರಿಸಬೇಕೆಂದು ಆತನ ಮಹತ್ವಾಕಾಂಕ್ಷೆ, ಬಹುಶಃ ಆತನ ಮನಸ್ಸು ಸಂಪೂರ್ಣವಾಗಿ 'ಬೆಳೆತುಂಬಿತು' ನಾಟಕ ಬರೆಯುವುದರಲ್ಲಿಯೇ ತಲ್ಲೀನ ವಾಗಿತ್ತು ಮುಕ್ತಾಬಾಯಿ ಆ ನಾಟಕದ ಹಸ್ತಪ್ರತಿಯನ್ನು ಹರಿದು ಚೂರು ಮಾಡಬೇಕೆಂದು ಸಮಯಕಾಯುತಿದ್ದಳು ಬರೆದು ಮೇಜಿನಮೇಲಿಟ್ಟು ರಮಾನಾಥನು ಐದುಘಂಟೆಯ ನಂತರ ವಾಯುವಿಹಾರಕ್ಕಾಗಿ ಎಂದಿನಂತೆ ಅಂದು ಹೊರಗೆ ಹೋದಾಗ, ಆಕೆ ನಾಟಕದ ಪ್ರತಿಯನ್ನು ಹರಿದು ಚೂರು ಚೂರುಮಾಡಿ ದೂರಕ್ಕೆಸೆದುಬಿಟ್ಟಳು

ಸಾಧಾರಣ ರಾತ್ರಿ ಎಂಟುಘಂಟೆಗೆ ಮನೆಗೆ ಬಂದ ರಮಾನಾಥನು ನಾಟಕದ ಹಸ್ತಪ್ರತಿಯನ್ನು ಹುಡುಕಿದನು ಆದರೆ ಅದು ಕೈಗೆ ಸಿಗಲಿಲ್ಲ ಹಿಂದೆ ನಾಲ್ಕಾರುಬಾರಿ ಹೆಂಡತಿಯ ಗುಣಪರೀಕ್ಷೆ ಮಾಡಿದ ಅವನಿಗೆ ಈ ಸಲವೂ ನಾಟಕದ ಪ್ರತಿಯನ್ನು ಮಂಗಮಾಯ ಮಾಡಿದವಳು ಅವಳೆಂದು ಊಹಿಸಲಿಕ್ಕೆ ಹೆಚ್ಚು ಕಷ್ಟವಾಗಲಿಲ್ಲ ಆದರೂ ಆಕೆಯ ಪ್ರಾಮಾಣಿಕತೆಯನ್ನು ಪರೀಕ್ಷಿಸ ಬೇಕೆಂದು, 'ಮುಕ್ತಾ, ನಾಟಕದ ಹಸ್ತಪ್ರತಿಯನ್ನೇನು ಮಾಡಿದೆ ?' ಎಂದು ಕೇಳಿದನು

'ನನಗೆ ತಿಳಿಯದು'

'ಮತ್ತಾರು ಅದನ್ನು ತೆಗೆಯಲಿಕ್ಕೆ ಬಂದರು ?'

ಮುಕ್ತಾ ಸುಮ್ಮನಾದಳು, ರಮಾನಾಥ 'ನಿನ್ನ ಯೋಗ್ಯತೆ ಮತ್ತು ಬುದ್ಧಿಗೆ ತಕ್ಕಂತೆ ನೀನು ಮಾತನಾಡಿದೆ ಹೆಂಗಸರನ್ನು ನಂಬಿದವರು ನಿಜ-ವಾಗಿಯೂ ಕೆಡುತ್ತಾರೆಂಬುದಕ್ಕೆ ಬೇರೆ ನಿದರ್ಶನ ಬೇಡ ನನ್ನ ಧ್ಯೇಯಾದರ್ಶ ಗಳನ್ನು ತಿಳಿದುಕೊಂಡು ನನಗೆ ಅನುಸರಿಸಿ ನಡೆದುಕೊಳ್ಳಲಿಕ್ಕಾಗದ ನೀನು ನನ್ನ ಹೆಂಡತಿಯೇ ಅಲ್ಲ'

'ಪ್ರೇಮವೆಂದರೇನೆಂದು ತಿಳಿಯದೆ, ಹೆಂಡತಿಯೆಂಬ ಒಂದು ಪ್ರಾಣಿ ಮನೆಯಲ್ಲಿದ್ದರೂ, ಆಕೆಯ ಆಸೆ ಆಕಾಂಕ್ಷೆಗಳನ್ನು ತಿಳಿಯುವಷ್ಟು ಅವಕಾಶ ಕಲ್ಪಿಸಿಕೊಳ್ಳದೆ ದಿನವೂ ಕತೆ ಕಾದಂಬರಿಗಳನ್ನು ಗೀಚಿದರೆ, ಅದಕ್ಕೆ ಧ್ಯೇಯ, ಆದರ್ಶವೆಂದು ಕರೆಯಲಾದೀತೇ ? ನನ್ನ ಅಭಿಪ್ರಾಯದಲ್ಲಿ Love begins

at home ಎಂದಿದೆ ಈ ಪ್ರೇಮವೆಂದರೇನೆಂದು ನಿಮ್ಮ ಅರ್ಥವೋ ನನಗೆ ತಿಳಿಯದು ವರದಕ್ಷಿಣೆ ಪಡೆದು ಮದುವೆಯಾದ ನೀವು, 'ನೀನು ನನ್ನ ಹೆಂಡತಿಯಲ್ಲ'ವೆಂದು ಅಷ್ಟು ಸುಲಭದಲ್ಲಿ ಹೇಗೆ ಹೇಳಲಿಕ್ಕಾದೀತು ?

ರಮಾನಾಥನಿಗೆ ಈಗ ಮನಸ್ಸು ಸ್ತಿಮಿತದಲ್ಲಿರುವುದೇ ಕಷ್ಟವಾಯಿತು ಅದು ತೂಗುಯ್ಯಾಲೆಯಂತೆ ಏರಿಳಿತ ಕಂಡಿತು ಸಾಹಿತ್ಯಸೇವೆ, ಸುಮತಿ-ಬಾಯಿಯ ನಿಷ್ಕಲ್ಮಶ ಪ್ರೇಮ— ಇವೆರಡರಲ್ಲಿ ಯಾವುದನ್ನು ಹಿಡಿಯುವದು ? ಮುಕ್ತೆಯು ನಿಜವಾಗಿಯೂ ಆತನಿಗೆ ಮೃತ್ಯುದೇವತೆಯಾಗಿ ಕಂಡುಬಂದಳು ಸಾಹಿತ್ಯಸೇವೆಗೆ ಆವಳ ಅತಂಕ ಸುಮತಿಬಾಯಿಯಲ್ಲಿಯ ಅಗಾಧ ಪ್ರೇಮ ಸಾಮಾಜಿಕ ನ್ಯಾಯದಂತೆ ನೀತಿಬಾಹಿರ ಅವನ ಅಭಿರುಚಿಯಲ್ಲಿ ಸದಾ ಆಸಕ್ತಳಾದವಳ ಪ್ರೇಮವಂತೂ ಬೇಕೇ ಬೇಕು

ಅದೇ ದಿನ ರಾತ್ರಿ ಮುಕ್ತಾ ಮಲಗಿದ್ದಾಗ ಈತನೆದ್ದು,

'ಪ್ರಿಯ **ಮುಕ್ತಾ,**

ನನಗೆ ಈಗ ಕೆಲವು ದಿನಗಳಿಂದ ಮನಸ್ಸು ತೀರಾ ವ್ಯಗ್ರವಾಗಿದೆ ನನ್ನ ಧ್ಯೆಯಾದರ್ಶಗಳನ್ನು ಸಾಧಿಸಲು ನೀನು ಮತ್ತು ಈ ನಮ್ಮ ಮನೆ ನನಗೆ ಅನು-ಕೂಲವಾದ ವಾತಾವರಣವನ್ನು ಕಲ್ಪಿಸಲಿಲ್ಲ ಆದುದರಿಂದ ನಿನ್ನೊಡನೆ ನಾನು ಮನೆಯಲ್ಲಿರಲಾರೆ ನೀನೇ ಸುಖವಾಗಿರು ನಾನು ಎಲ್ಲಿಯೋ ಹೋಗಿ ನನ್ನ ಸಾಹಿತ್ಯ ಸೇವೆಯನ್ನು ಮುಂದುವರಿಸುವೆ ನಿನಗೆ ನನ್ನ ಯೋಚನೆ ಬೇಡ ನಿನ್ನ ಯೋಚನೆಯನ್ನು ನಾನು ಇಂದಿನಿಂದ ಬಿಟ್ಟಿರುವೆ ನಿನ್ನಲ್ಲಿ ನನಗೆ ದ್ವೇಷವಿರದೆ ಅಪಾರ ಪ್ರೇಮವಿದೆಯೆಂದು ಮಾತ್ರ ಹೇಳಬಲ್ಲೆ ಇದೇ ನನ್ನ ಮುಗಿದ ಲೇಖನ ಬರುತ್ತೇನೆ ದೇವರು ನಿನಗೆ ಒಳ್ಳೆಯದನ್ನು ಮಾಡಲಿ !'

ನಿನ್ನ ಪ್ರೀತಿಯ

**ರಮಾನಾಥ**

.. ಮೇಲ್ಕಂಡಂತೆ ಒಂದು ಪತ್ರವನ್ನು ಬರೆದು ಆಕೆಯ ತಲೆದಿಂಬಿನ ಕೆಳಗಿಟ್ಟು, ಆಗಲೇ ಮನೆ ಬಿಟ್ಟು ಹೊರಟನು ಆತ ನಡೆದುಹೋದ ದಾರಿ ಯಾರಿಗೂ ತಿಳಿಯದು ಬಹಳ ಕಾಲದ ನಂತರ ಪಾಂಡಿಚೇರಿಯಲ್ಲಿಯ ಅರವಿಂದಾಶ್ರಮದಲ್ಲಿರುವನೆಂದು ತಿಳಿದು ಬಂದಿತು .. .

ಆದರೆ ಮುಕ್ತಾ ಮಾತ್ರ ಒಡೆದು ಹೋದ ಮುತ್ತಾದಳು ! ಬೆಳಿಗ್ಗೆ ಎದ್ದು ಹಾಸಿಗೆ ಸುತ್ತುವಾಗ ತಲೆದಿಂಬಿನ ಕೆಳಗಿದ್ದ ಕಾಗದದ ಕಡೆಗೆ ಸಹಜವಾಗಿ ಅವಳ ದೃಷ್ಟಿ ಚೆಲ್ಲಿತು ಒಡನೆಯೇ ಅದನ್ನು ಕೈಗೆ ತೆಗೆದುಕೊಂಡು ಓದಿದಳು ಅದೊಂದು ಮುಗಿದ ಲೇಖನ ! ಆದರೆ ಅವರಿಬ್ಬರ ಪ್ರೇಮದ ನಂದನವನವು ಮರುಭೂಮಿಯಾಯಿತೇ ಹೊರತು ಅದು ಬೆಳೆ ತುಂಬ ಕಳೆಯಾಗಿ ತೋರಲಿಲ್ಲ 'ಬೆಳೆ ತುಂಬಿತು' ಬರೆದಾಗಲೇ ರಮಾನಾಥನು 'ಮುಗಿದ ಲೇಖನ' ಮುಗಿಸಲು ಆ ಪ್ರೇಮದ ಮಡದಿ ಮುಕ್ತಾ ಕಾರಣಳಾದಳು

ಅಂತೆಯೇ ಅವರಿಬ್ಬರ ದಾಂಪತ್ಯ ಪ್ರೇಮ, ಸುಖ ಜೀವನ ವಿರಸದ ಸಮಾಧಿಯನ್ನು ಕಂಡವು ರಮಾನಾಥ ವೀರ ತ್ಯಾಗಶಿರೋಮಣಿ !

---

# ಪಾಪದ ಫಲ

ತಮ್ಮಿಂದ ಇತರರಿಗೆ ಉಪಕಾರವಾಗಿ ಸತ್ಕೃತಿಯಲ್ಲಿ ಜೀವನವು ಸಾರ್ಥಕ ವಾಗಲೆಂದು ಶ್ರಮಿಸುವ ಪುಣ್ಯಪುರುಷರಿರುತ್ತಾರೆ ಆದರೆ ದೈವವಿತ್ತ ಸುಸ್ಥಿತಿ ಯನ್ನು ಅನುಭವಿಸುತ್ತ ಕೊಬ್ಬಿನಿಂದ ಪರಪೀಡನೆಯಲ್ಲಿಯೇ ಸುಖ ಪಡೆಯುವ ಪಾಪಿಗಳೂ ಅನೇಕ ಮಂದಿ

ಮಾಧವರಾಯರು ಒಳ್ಳೆಯ ಸ್ಥಿತಿವಂತರು ಅವರ ಜಮೀನುದಾರಿ ಯಲ್ಲಿ ಒಕ್ಕಲುಮಕ್ಕಳು ಗೇಣಿಗೆ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದರು ಬಡವನು ಸದಾ ಎಡರಿಲ್ಲದೆ ಜೀವನ ನಾಗಿಸಲು ಆರ್ಥಿಕ ಬೆಂಬಲವೆಲ್ಲಿಂದ ಬರಬೇಕು ? ಅಪ್ಪಿತಪ್ಪಿ ಗೇಣಿಯು ಬಾಕಿಯಾಯಿತೆಂದರೆ ಮಾಧವರಾಯರು ಮಾರ್ವಾಡಿಯಂತೆ ಒಂದು ಸೇರು ಭತ್ತ ಕೂಡ ಬಿಡದೆ ನಿರ್ದಯೆಯಿಂದ ವಸೂಲಿ ಮಾಡಿಬಿಡುತ್ತಿದ್ದರು ಅವರ ಅಧಿಕಾರ ಹಾಗೆ ಚಲಾವಣೆಯಲ್ಲಿದ್ದಿತು ಕಠಿಣರು, ಕ್ರೂರಿಗಳು ಅಂತೆಯೆ ಸಾಮಾನ್ಯವಾಗಿ ಅವರನ್ನು ಕಂಡರೆ ಎಲ್ಲರಿಗೂ ಹೆದರಿಕೆ

ದುರ್ಗ ಅವರಲ್ಲಿದ್ದ ಒಕ್ಕಲು ಬಹು ಪ್ರಾಮಾಣಿಕ ಬೈರಿ ಆತನ ಹೆಂಡತಿ ಇವರಿಗೆ ನಾಗಿ ಎಂಬ ಒಬ್ಬ ಮಗಳಿದ್ದಳು ಅವಳಂತಹ ಸುಂದರಿ ಬಹಳ ಅಪರೂಪ ಮದುವೆಯ ವಯಸ್ಸು ಬಡವರ ಮಕ್ಕಳ ಮದುವೆ ಯೆಂದರೆ ಏಕಾಏಕಿ ಸಾಧ್ಯವಾಗುವುದೇ ? ಮೊದಲನೆಯ ಹೆಂಡತಿಯನ್ನು ಕಳೆದುಕೊಂಡು ಎರಡನೆಯ ಸಂಬಂಧಕ್ಕೆ ವಯಸ್ಸಾಗಿದ್ದ ಮಾಧವರಾಯರ ಕಣ್ಣು ನಾಗಿಯ ಮೇಲೆ ಎರಗಿತು ಹೇಗಾದರೂ ಮಾಡಿ ನಾಗಿಯನ್ನು ಬಲೆಗೆ ಹಾಕಿಕೊಳ್ಳುವ ಮನಸ್ಸು ಆದರೆ ಊರಿನ ಜನರೇನೆಂದುಕೊಂಡಾರೆಂಬ ಭೀತಿ ಅದನ್ನು ಮರೆಮಾಡಿಕೊಂಡು ನಾಗಿಯನ್ನು ಕೆಣಕಲಾರಂಭಿಸಿದರು. ನಾಗಿಗೆ ರಾಯರ ಮನೆಯಲ್ಲಿ ಕೆಲಸ ಕಲ್ಪಿತವಾಯಿತು ಕಸಗುಡಿಸುವದು, ಅಡಿಗೆ ಯವರಿಗೆ ಪಾತ್ರೆಗಳನ್ನು ತೊಳೆದು ಕೊಡುವುದು, ಬಟ್ಟೆಗಳನ್ನು ಒಗೆಯುವುದು. ಇತ್ಯಾದಿ.

ಒಂದು ದಿವಸ ಸಾಯಂಕಾಲ ರಾಯರ ಅಡಿಗೆಯವನು ಅಡಿಗೆಯ ಮನೆಯಲ್ಲಿ ತನ್ನ ಕೆಲಸದಲ್ಲಿ ನಿರತನಾಗಿದ್ದನು ವೇಳೆ ಮೀರಿ ಬಂದು ಒಟ್ಟೆ,

ಗಳನ್ನು ಒಗೆದು ಪಾತ್ರೆಗಳನ್ನು ತೊಳೆದು ಕೊಡುವುದಕ್ಕೆ ಹೊತ್ತಾಗಿ ಬಿಟ್ಟಿತು ದೀಪ ಅಂಟಿಸುವ ಮೊದಲೇ ಕಸಗುಡಿಸಿ ಮನೆ ಸೇರಬೇಕೆಂದು ನಾಗಿಯು ಅವಸರದಿಂದ ಎಲ್ಲಾಕಡೆ ಗುಡಿಸಿ ರಾಯರ ಕೋಣೆಗೆ ಬಂದಳು ಮಬ್ಬು ಕವಿದಿತ್ತು ಆತುರತೆಯಲ್ಲಿದ್ದ ನಾಗಿಗೆ ಕೋಣೆಯಲ್ಲಿ ರಾಯರು ಬಂದುದು ತಿಳಿಯಲಿಲ್ಲ ಸೊಂಟದ ಮೇಲೆ ಕೈ ಬಿದ್ದಾಗ ಭಯಗೊಂಡು ನೋಡಿದಳು ರಾಯರು ನಗುತ್ತ ನಿಂತಿದ್ದರು ಆ ಕ್ಷಣದಲ್ಲಿಯೇ ನಾಗಿಯ ತಲೆಯಲ್ಲಿ ಒಂದು ಸಾವಿರ ಭಾವನೆಗಳು ಸುಳಿದು ಹೋದುವು ಇನ್ನು ತನ್ನ ಗತಿಯು ಮುಗಿಯಿತೆಂದು ಕಿರಿಚಿಕೊಳ್ಳಬೇಕು! ಅದನ್ನು ಮೊದಲೇ ಕಂಡುಕೊಂಡವರಂತೆ ರಾಯರು ಅವಳ ಬಾಯಿಗೆ ಕೈಯಿಟ್ಟು ಅವಳನ್ನು ಸೆಳೆದುಕೊಂಡರು ತಮ್ಮಲ್ಲಿದ್ದ ಪೈಶಾಚಿಕ ಶಕ್ತಿಯನ್ನು ಪ್ರಯೋಗಿಸಿದರೆ ಆ ಪರಿಸ್ಥಿತಿಯಲ್ಲಿ ಅಬಲೆಯು ಏನು ಮಾಡಬಲ್ಲಳು! ಅವಳು ಮೈ ಮರೆತು ಕೆಳಗೆ ಒರಗಿದಳು ರಾಯರು ತಮ್ಮ ಮೋಹವನ್ನು ತೀರಿಸಿಕೊಂಡುದಾಯಿತು ಅರ್ಧ ಎಚ್ಚರಗೊಂಡಾಗ ನಾಗಿಯನ್ನು ಕುರಿತು 'ಎಲ್ಲಿಯಾದರೂ ಬಾಯಿ ಬಿಟ್ಟೀಯೋ, ಪ್ರಾಣ–ಮಾನಗಳೆರಡೂ ಉಳಿಯಲಿಕ್ಕಿಲ್ಲ, ಜಾಗ್ರತೆ!' ಎಂದು ಎಚ್ಚರಿಸಿ ಹೊರಕಳುಹಿಸಿದರು

ಮಾರನೆಯ ದಿನ ನಾಗಿ ಕೆಲಸಕ್ಕೆ ಬರಲಿಲ್ಲ ಮೈಗೆಸರಿಯಿಲ್ಲವೆಂದು ತಾಯಿಗೆ ಹೇಳಿ ಮನೆಯಲ್ಲಿ ನಿಂತಳು ಹೌದು, ತನ್ನ ಮಾನಗೆಟ್ಟ ರೀತಿಯನ್ನು ಯಾರಲ್ಲಿ ವರ್ಣಿಸಿಕೊಂಡಾಳು? ದಿನವೆರಡಾಯಿತು ಕೆಲಸಕ್ಕೆ ಯಾಕೆ ಬರಲಿಲ್ಲವೆಂದು ರಾಯರು ಹೇಳಿಕಳುಹಿಸಿದರು ನಾಗಿ ತಾನು ಹೋಗುವುದಿಲ್ಲವೆಂದು ಖಂಡಿತವಾಗಿ ತಾಯಿಗೆ ತಿಳಿಸಿಬಿಟ್ಟಳು ದುರ್ಗನಿಗಾಗಲಿ ಬೈರಿಗಾಗಲಿ ಕಾರಣ ತಿಳಿಯಲಿಲ್ಲ ತಾವೇ ಯಾರಾದರೂ ರಾಯರ ಮನೆ ಕೆಲಸಕ್ಕೆ ಹೋಗಿ ಬರಲಾರಂಭಿಸಿದರು

ದಿನಗಳುರುಳಿದವು, ತಿಂಗಳುಗಳಾದವು ನಾಗಿ ಬಸುರಿಯಾಗಿದ್ದ ವಿಚಾರವು ತಂದೆ ತಾಯಿಗಳಿಗೆ ತಿಳಿಯಿತು ಕ್ರಮೇಣ ಊರೆಲ್ಲಾ ತಿಳಿಯಿತು ಕುಲದವರು ಸುಮ್ಮನೆ ಬಿಟ್ಟಾರೆ? ತಪ್ಪುಕಾಣಿಕೆ, ಬಹಿಷ್ಕಾರ ಸಕಲವೂ ನಡೆಯಿತು ಆದರೆ ಅದಕ್ಕೆ ಕಾರಣಕರ್ತನಾದವನ ಸುದ್ದಿಯನ್ನು ಮಾತ್ರ ಗಟ್ಟಿಯಾಗಿ ಹೇಳಲಿಲ್ಲ ಸಹ

ಲೋಕವೇನೆಂದರೂ ಕರ್ಮಫಲ ಸುಮ್ಮನಿರುವುದಿಲ್ಲ ನಾಗಿಯು ಗಂಡು ಕೂಸನೊಂದು ಹೆತ್ತಳು ಆಗ್ಗೆ ಅವಮಾನದಿಂದಲೂ ಬಡತನದಿಂದಲೂ ಅವಳ

ಮನೆಯವರು ಅರ್ಧವಾಗಿ ಹೋಗಿದ್ದರು ಮೂರು ನಾಲ್ಕು ತಿಂಗಳು ಕಳೆದುವು ಒಮ್ಮೆ ಆಕಸ್ಮಿಕವಾಗಿ ರಾಯರು ನಾಗಿಯನ್ನು ನೋಡಿದರು ಮತ್ತೆ ಅವರ ಬುದ್ಧಿವಿವೇಕ ಶೂನ್ಯವಾಯಿತು ಮನೆಗೆಲಸಕ್ಕೆ ಬರತಕ್ಕದೆಂದು ಹೇಳಿ ಕಳುಹಿಸಿದರು ಪ್ರಾಣವಿಡುವವರೆಗೆ ಬರುವುದಿಲ್ಲವೆಂದು ನಾಗಿ ಯೆಂದಳು ಈ ಬಾರಿ ದುರ್ಗ-ಬೈರಿಯಾದರೂ ಹೋಗಲಿಲ್ಲ ಇದರಿಂದ ರಾಯರಿಗೆ ಅವಮಾನವಾದಂತಾಯಿತು ಸಿಟ್ಟಿನಿಂದ ಅವರ ರಕ್ತ ಕುದಿಯಲಾರಂಭಿಸಿತು.

ಒಂದು ದಿನ ಎಲ್ಲಿಯೋ ಹೊರಟಿದ್ದವರು ದುರ್ಗನ ಮನೆ ಮುಂದೆ ಬಂದು ನಿಂತು ಕೂಗಿದರು ದುರ್ಗ ಹೊರಗೆ ಬಂದನು

"ಕರೆಯೋ ನಿನ್ನ ಮಗಳನ್ನು" ಎಂದು ಅಬ್ಬರಿಸಿದರು ನಾಗಿಯು ಮಗುವನ್ನು ತೊಟ್ಟಿಲಲ್ಲಿ ಬಿಟ್ಟು ಬಂದಳು ಅವಳು ಯಾವುದಕ್ಕೂ ಸಿದ್ಧವಾಗಿ ಬಂದಂತೆಯೇ ಇದ್ದಿತು

"ನಾಗಿದೇವಿ ಗಂಡು ಮಗುವಿನ ತಾಯಿಯಂತೆ, ಹೇಳಿಕಳುಹಿಸಿದರೆ ಕೆಲಸಕ್ಕೆ ಬರುವುದಕ್ಕೆ ಪುರುಸತ್ತು ಆಗಲಿಲ್ಲೇನು ?"

"ಪುರುಸತ್ತಿದೆ, ನಿಮ್ಮ ಮನೆಗೆಲಸಕ್ಕೆ ಬರೋದಿಲ್ರಿ"

"ಯಾಕ್ರೀ ?' ಎಂದರು ರಾಯರು ಅಣಕಿಸುತ್ತಾ

"ಯಾಕೆ ಬರಬೇಕು ?"

"ಓಹೋ ಅಷ್ಟಕ್ಕೆ ಬಂದ್ಯಾ ! ನೋಡುತ್ತಿರು ಕೈ ಕಾಲು ಕಟ್ಟಿ ಮನೆಗೆ ಎಳೀತೀನಿ"

ದುರ್ಗನ ರಕ್ತ ದೇಹಬಿಟ್ಟು ಹೊರಗೆ ಬರುವಂತಾಯಿತು ಇನ್ನು ಅವನಿಂದ ಸಹಿಸುವುದಾಗಲಿಲ್ಲ

ಹೊರಗೆ ನಿಂತಿದ್ದ ಬೈರ-ನಾಗಿಯರನ್ನು ಮನೆಯೊಳಗೆ ಕರೆದುಕೊಂಡು ಹೋದನು ರಾಯರು ಹೆಮ್ಮೆಯಿಂದ ತಮ್ಮ ಅಧಿಕಾರ ನಡೆಯಿತೆಂಬಂತೆ ಇನ್ನೂ ಹೊರಗೆ ನಿಂತಿದ್ದರು ಒಳಗೆ ಹೋದ ದುರ್ಗನು ದೊಣ್ಣೆಯೊಂದಿಗೆ ಹೊರಗೆ ಬಂದು ರಾಯರನ್ನು ಸಮೀಪಿಸುತ್ತಲೂ ಅವರಿಗೆ ಆಶ್ಚರ್ಯವಾಯಿತು

'ಚಂಡಾಳ, ನಿಲ್ಲು' ಎಂದು ಅಬ್ಬರಿಸಿದನು

'ರಾಯರು ಬಿಟ್ಟುಕೊಡದೆ ಅಂದರು

"ಬೋ   ಮಗನೆ, ತಿಂದ ಅನ್ನ ನೆತ್ತಿಗೇರಿದೆಯೋ? ದೊಡ್ಡವರು, ಚಿಕ್ಕವರೆಂಬುದು ಇರಲಿ"

"ನಾವು ಸಣ್ಣವರು ಸಣ್ಣವರಾಗಿಯೇ ಇದ್ದೇವೆ ದೊಡ್ಡವರು ದೊಡ್ಡತನ ವನ್ನು ಉಳಿಸಿಕೊಂಡಿಲ್ಲ"

"ಮನೆಗೆ ಬರಲು ಹೇಳಿ ಕಳುಹಿಸಿದರೆ ಸೊಕ್ಕಿನ ಮಾತಾಡುತ್ತಿರುವೆ! ನಾಗಿಯು ಹೊರಗೆ ಬಂದಳು ಈಗ ಅವಳು ವಿಷಸರ್ಪಿಣಿಯಾಗಿದ್ದಳು"

"ನಿಮ್ಮ ಮನೆಗೇಕೆ ಬರಬೇಕು? ಅಷ್ಟು ಉಳಿಸಿಕೊಂಡಿದ್ದೀರೇನು? ನಿಮ್ಮಲ್ಲಿ ಯಾವ ಒಳ್ಳೆಯ ಗುಣ ಉಳಿದಿದೆ?"

ದುರ್ಗ ಅನ್ನುತ್ತಿದ್ದ

'ಜಮೀನಿನಿಂದ ಹೊರಗೆ ಹಾಕೀಯ ಅಷ್ಟೆ ತಾನೆ? ನಿನ್ನಂತಹ ನರ ಪಿಶಾಚಿಯ ಬಳಿ ಇರುವುದಕ್ಕಿಂತ ಎಲ್ಲಾದರೂ ಹೋಗುವುದು ಮೇಲು ರಟ್ಟೆ ಮುರಿದು ಹೊಟ್ಟೆ ಹೊರೆದುಕೊಳ್ಳುವ ನಮಗೆ ಯಾರ ಹಂಗೇನು? ನಮ್ಮ ನಂಬಿಕೆಯನ್ನು–ರೈತರ ನಂಬಿಕೆಯನ್ನು ಇಂದು ಕಳೆದುಕೊಂಡೆ, ಪಾಪಿ! ದುರ್ಗ, ಅವನ ಹಿರಿಯರೂ ತಲೆ ಮಾರುಗಳಿಂದ ರಾಯರ ಒಕ್ಕಲು ಅಷ್ಟಿದ್ದರೂ ಇಂದು ದುರ್ಗನಲ್ಲಿ ಅವರು ಏಕ ವಚನಕ್ಕೆ ಗುರಿಯಾದರು ಇನ್ನೂ ಮುಂದಕ್ಕೆ ಏನೇನೋ ಬೈದಾಡುತ್ತಿದ್ದನು

"ದುರ್ಗಾ, ನಾಲಿಗೆ ಕತ್ತರಿಸಿಬಿಟ್ಟೇನು! ಕುಡಿದು ಬಂದಿರುವೆಯೊ ಹೇಗೆ?"

"ಕುಡಿದು ಬಂದಿಲ್ಲ ಅಂತೂ ಇಷ್ಟು ತಿಳಿದುಕೋ! ಹೀಗೆಯೇ ಮುಂದು ವರಿದರೆ ಮುಂದಕ್ಕೆ ಬದುಕುವುದು ಕಷ್ಟವಿದೆ ಎಚ್ಚರಿಕೆ!"

* * * *

ರಾಯರ ಆಜ್ಞೆಯಂತೆ ಕೆಲವು ಆಳುಗಳು ದುರ್ಗನ ಮೇಲೆ ಬಿದ್ದರು ಅವನು ಉಸಿರಾಡುವುದೇ ಕಷ್ಟವಾಗುವಂತೆ ಮಾಡಿ ಬಿಟ್ಟು ನಡೆದರು ಮಾರ ನೆಯ ದಿನವೇ ದುರ್ಗನು ರಾಯರ ಜಮೀನಿನಿಂದ ಹೊರಗಾದನು. ಮನೆಯೂ ತಪ್ಪಿತು ದಿಕ್ಕಿಲ್ಲದವರಾದರು ಆದರೆ ರಾಯರಿಗೆ ನಾಗಿಯ ಮೇಲಿನ ಮೋಹ ತಪ್ಪಲಿಲ್ಲ ನಾಗಿಯಾದರೋ ಮತ್ತೊಮ್ಮೆ ಅವರ ಕೈಗೆ ಬೀಳಲಿಲ್ಲ

ಪ್ರಯತ್ನ ಸಫಲವಾಗದ ರಾಯರು ಇದೀಗ ತಮ್ಮ ಶೌರ್ಯವನ್ನು ತೋರಲಾರಂಭಿಸಿದರು ನಾಗಿಯು ವ್ಯಭಿಚಾರ ನಡೆಸುತ್ತಿರುವಳೆಂದು ಪೋಲೀ

ಸಿಗೆ ದೊರಿತ್ತು ಫಜೀತಿ ಮಾಡಿಬಿಟ್ಟರು  ತಮ್ಮ ಛಲವನ್ನು ತೀರಿಸಿಕೊಂಡರು ಅವರು ಮನಸ್ಸು ಮಾಡಿದ ಮೇಲೆ ಸಾಕ್ಷಿಗಳಿಗೇನು ಕೊರತೆಯೇ ?

*    *    *    *

ಪಟ್ಟಣದಲ್ಲಿ ಓದುತ್ತಿದ್ದ ರಾಯರ ಇಬ್ಬರು ಮಕ್ಕಳು ಹರಿಯುತಿದ್ದ ಹೊಳೆಗೆ ಹೋಗಿ ಮುಳುಗಿಕೊಂಡರೆಂದು ಹಠಾತ್ತನೆ ಸುದ್ದಿ ಬಂದಿತು ರಾಯರ ಹೃದಯವು ಒಡೆಯುವಂತಾಯಿತು ಕಂಬನಿಯ ಕಡಲಲ್ಲಿ ಮುಳುಗಿದರು ಮಾಡಿದ ಪಾಪ ಕೃತ್ಯಗಳ ನೆನಪು ಸುಳಿಯಿತು ತಮ್ಮ ದರ್ಪದಲ್ಲಿ ಬಡ-ಕುಟುಂಬವೊಂದನ್ನು ಹಾಳು ಮಾಡಿದ್ದರು ಅದರಿಂದ ಸಂತೋಷಪಟ್ಟಿದ್ದರು ಆದರೆ ಇಂದು ಅವರ ಮನೆ ಉಳಿಯಲಿಲ್ಲ

ರಾಯರಿಗೆ ರಾತ್ರಿಯ ವೇಳೆ ರಾತ್ರಿಯಾಗಿ ಉಳಿಯಲಿಲ್ಲ ಕಣ್ಣು ಮುಚ್ಚ-ಲಾಗದು, ಮುಚ್ಚಿದರೆಂದರೆ ಒಡನೆಯೇ ಕೂಗಿಕೊಂಡು ಮೇಲೇಳುವರು ಇದು ಕನಸೆಂದು ನೆನೆದು ಮತ್ತೆ ಮಲಗುವರು  ಓರ್ವ ವ್ಯಕ್ತಿ ಬಂದು ದೂರದಲ್ಲಿ ನಿರ್ಗತಿಕಳಾಗಿ ವ್ಯಥೆಯ ಪ್ರತೀಕವಾಗಿ ನಿಂತು ನಾಗಿಯಕಡೆ ತೋರಿಸುತ್ತಾ ನಿನಗೆ ತಕ್ಕ ಶಿಕ್ಷೆ ಮಾಡುವೆನೆಂದು ಹೇಳುತ್ತಾ ರಾಯರ ಇಬ್ಬರು ಮಕ್ಕಳನ್ನು ನೀರಿನಲ್ಲಿ ತಳ್ಳಿದನು ರಾಯರು ಮತ್ತೆ ಬೆಚ್ಚಿ ಎದ್ದರು ಪುನಃ ಮಲಗಿದಾಗ ದುರ್ಗ ಕಾಣಿಸಿಕೊಂಡ ರೌದ್ರಾವೇಶ ಮೂರ್ತಿ ಮುಂದೆ ಮುಂದೆ ಬರುತ್ತಿ-ದ್ದಾನೆ 'ಓಹ್' ಇನ್ನು ಬದುಕುವುದಕ್ಕಿಲ್ಲ

ರಾಯರಿಗೆ ಜೀವನವೇ ದುರ್ಭರವಾಯಿತು ಪಶ್ಚಾತ್ತಾಪದ ಅಗ್ನಿಯಲ್ಲಿ ಬೇಯಲಾರಂಭಿಸಿದರು ಹುಚ್ಚರಾಗುವುದಕ್ಕೆ ಇನ್ನು ಬಹಳ ಕಾಲವಿಲ್ಲವೆಂಬುದೇ ಅವರಿಗೆ ನಿಶ್ಚಯವಾಯಿತು

ಬಾಧೆ ಅನುಭವಿಸಲಾರದೆ ರಾಯರು ಓಡಿದರು ನಾಗಿಯ ಮನೆಗೆ ಬಂದು ಬಾಗಿಲಲ್ಲಿ ನಿಂತರು  ಗೋಳೋ ಎಂದು ಅಳುವು ಆರಂಭವಾಯಿತು ಕಣ್ಣಿಂದ ಧಾರಾಕಾರವಾಗಿ ನೀರು ಸುರಿದು ಅದರಲ್ಲಿ ತೇಲಿ ಹೋಗು-ವಂತಾಯಿತು

ನಾಗಿಯೂ ಮರುಕ ತುಂಬಿದವಳಾಗಿ ರಾಯರನ್ನು ನೋಡಿದಳು ರಾಯರ ಹೃದಯವು ಕ್ಷಮೆಯ ಸುಖವನ್ನು ಅನುಭವಿಸಿ ಶಾಂತಿ ಹೊಂದಿತು

# ಪಶ್ಚಾತ್ತಾಪ ಪ್ರಸೀತ

ಹೊರಗೆ ಮನೆಯ ನಾಯಿ ಬಗುಳಿತು ಇಷ್ಟರಲ್ಲಿ ನಾನು ಊಟ ಮುಗಿಸಿ ಕೈತೊಳೆದು ಹೊರಗೆ ಬಂದೆ ನಮ್ಮ ನೆರೆಮನೆಹಳ್ಳಿಯ ಗೋವಿಂದಪ್ಪ ನವರ ಮಗ ರಾಮಚಂದ್ರನೇ ಬರುತ್ತಿದ್ದನು ಗೋವಿಂದಪ್ಪನವರಿಗೆ ಮೂವರು ಮಕ್ಕಳು– ರಾಮಚಂದ್ರ, ಶಾಂತಾ ಮತ್ತು ಲಕ್ಷ್ಮಣ, ಶಾಂತೆಗೆ ಈ ಮೊದಲೇ ಮದುವೆಯಾಗಿತ್ತು ಗೋವಿಂದಪ್ಪನವರು ಮತ್ತು ಅವರ ಮಡದಿ ಮಹಾಲಕ್ಷ್ಮಿ ಈ ಮೊದಲೇ ತೀರಿಕೊಂಡಿದ್ದರು

ರಾಮಚಂದ್ರನ ಮನೆಯವರು ತಕ್ಕಮಟ್ಟಿಗೆ ಸ್ಥಿತಿವಂತರು ಇದ್ದ ಇಬ್ಬರು ಮಕ್ಕಳು ಕೈಗಳನ್ನು ಕೆಸರುಮಾಡಿಕೊಂಡು ಕಷ್ಟಪಟ್ಟು ಸ್ವಂತ ಜಮೀನು ಸಾಗುವಳಿ ಮಾಡಿಕೊಂಡರೆ ಮನೆ ಬಾಗಿಲಿಗೆ ಬಂದು ಹೋಗುವವರಿಗೆ ಒಂದು ಹಿಡಿ ಅನ್ನ ಕೊಡಬಹುದು ಆದರೆ ರಾಮಚಂದ್ರ ಹಂಪೆ, ಹೊಸಪೇಟೆಯತ್ತ ಕಡೆಗೆ ಹೋದರೆ, ಲಕ್ಷ್ಮಣ ಬೆಂಗಳೂರು, ಮೈಸೂರು ಕಡೆಗೆ ಊರ ಸಂಚಾರಕ್ಕೆ ಹೋಗುವನು ಇತ್ತ ಮನೆಯ ಬದುಕು ಹಾಳು ! ಅಣ್ಣನೆಲ್ಲಿರುವನೆಂದು ತಮ್ಮನಿಗೆ ತಮ್ಮನೆಲ್ಲಿರುವನೆಂದು ಅಣ್ಣನಿಗೆ ತಿಳಿಯದು ಅವರವರ ಪಾಡಿಗೆ ಅವರವರು, ಹೋಟೆಲಲ್ಲಿ ಸಪ್ಲೈಕೆಲಸ, ಅದರಿಂದ ಸಂಪಾದಿಸಿದ ಹಣ ಬೀಡಿ, ಸಿಗರೆಟ್ ಸಿನೀಮಾಗಳಿಗೆ ಖರ್ಚಾಗುತ್ತಿತ್ತು ನಾನೆಲ್ಲ ಈ ಅಣ್ಣತಮ್ಮಂದಿರಿಗೆ ಹೆಚ್ಚು ಕಡಿಮೆ ಬಾದರಾಯಣ ಸಂಬಂಧ

ಮೊದಲು ಆಜಾನುಬಾಹು, ದೃಢಕಾಯನಾಗಿದ್ದ ರಾಮಚಂದ್ರ ಈಗ ನಮ್ಮ ಕಣ್ಣೆದುರಿಗೆ ಪ್ರತ್ಯಕ್ಷನಾದಾಗ ಕೃಶನಾಗಿದ್ದ ಕಣ್ಣುಗುಡ್ಡೆಗಳೆಲ್ಲಾ ಒಳಗಿಳಿ ದಿದ್ದುವು ಉಡಿಗೆ ತೊಡಿಗೆಗಳೆಲ್ಲ ದೂಳಿನಿಂದ ಮಲಿನವಾಗಿದ್ದುವು ಕೈಕಾಲು ಗಳಲ್ಲಿ ಬಲವಿಲ್ಲ, ಮುಖದಲ್ಲಿ ತೇಜಸ್ಸಿಲ್ಲ, ಕೈಯಲ್ಲಿ ಕಾಸಿಲ್ಲ, ಮೈಯಲ್ಲಿ ಮಾಂಸವಿಲ್ಲ ಅಯ್ಯೋ ! ನಮ್ಮ ಸಂಪಿಗೆಹಳ್ಳಿ ರಾಮಚಂದ್ರ ಹೀಗಾಗಬೇಕಿತ್ತೆ? ನನಗಂತೂ ಮೊದಲಿಗೆ ಅವನ ಗುರುತೇ ಸಿಗಲಿಲ್ಲ ಮನೆಯ ನಾಯಿ ಈ ವ್ಯಕ್ತಿ-ಯನ್ನು ನೋಡಿದ ಕೂಡಲೇ 'ಬಕ್‌ಬೌ' ಎಂದು ಒಂದೇ ಸವನೆ ಬಗುಳಲಾರಂಭಿ ಸಿತು ಅಷ್ಟರಲ್ಲಿ ನನ್ನ ದೊಡ್ಡಮ್ಮ ಊಟ ಮುಗಿಸಿ ಕೈತೊಳೆಯಲು ಹೊರಕ್ಕೆ ಬಂದಳು ಆಕೆಯೂ ನೋಡಿ ನಿಂತಳು– ಹೌದು ನಮ್ಮ ಸಂಪಿಗೆ ಹಳ್ಳಿಯ

ರಾಮಚಂದ್ರ ! ಏನು ರೋಗ ತಂದುಕೊಂಡಿದ್ದಾನೋ ! ಇವನಿಗೆ ಪಥ್ಯಪಾನ ನಡೆಯಿಸುವವರಾರು ? ಅಂತೂ ಒಂದಿಷ್ಟು ಅನ್ನ, ಸಾರು ಹಾಕಿದೆವು ಅವನು ಉಂಡನು ಆ ಮೇಲೆ ಹಾಸಿಗೆ ಬಿಚ್ಚಿ ಮಲಗಿಕೊಂಡನು

ಆ ರಾತ್ರಿ ಅವನ ಬಾಯಿಯಿಂದ ಎಲ್ಲಾ ವಿಚಾರ ಹೊರಗೆ ಬಿತ್ತು ಹೊಸಪೇಟೆ, ಹಂಪೆಯತ್ತ ಕಡೆಗೊಂದು ಹೋಟೆಲ್, ಅದರ ಮಾಲೀಕನಿಗೊಬ್ಬಳು ಮಗಳು ಅವಳ ಹೆಸರು ತುಳಸಿ, ಮ್ಯಾನೇಜರ್ ಶ್ರೀನಿವಾಸರಾಯರ ಹೆಂಡತಿ ಭಾಗೀರಥಿಯಮ್ಮನಿಗೆ ರಾಮಚಂದ್ರನೆಂದರೆ ಬಹಳ ಮಮತೆಯಂತೆ ಸರಿ ತುಳಸಿಗೂ ಅವನಿಗೂ ಸಲಿಗೆ ಹೆಚ್ಚಾಗಿ ಕೊನೆಗೆ ಅವನಿಗೆ ಯೌವನದ ಕಾಹಿಲೆಗಾರಂಭವಾಯಿತು ಅತ್ತ ದಿನವೊಂದಕ್ಕೆ ಮೂರು ನಾಲ್ಕು ಕಟ್ಟು ಬೀಡಿ ಸೇದುತ್ತ, ಬಾಯಿಂದ ಸೀಟಿಹಾಕುತ್ತ, ಮ್ಯಾನೇಜರ್ ಇಲ್ಲದ ವೇಳೆ ತಾನೇ ಮ್ಯಾನೇಜರ್ ಎಂದು ಹೇಳಿಕೊಂಡು ತನ್ನ ದರ್ಪವನ್ನು ಎಲ್ಲರ ಮೇಲೂ ತೋರಿಸತೊಡಗಿದನು ಶ್ರೀನಿವಾಸರಾಯರ ಬಲಗೈಯಂತಾದನು ಹೀಗೆ ತುಳಸಿಗೂ ರಾಮಚಂದ್ರನಿಗೂ ಸ್ನೇಹ ಬೆಳೆದು ದಿನ ದಿನವೂ ಗಾಢವಾಗುತ್ತ ಬಂದಿತು ಮ್ಯಾನೇಜರರಿಗೆ ಗೊತ್ತಿಲ್ಲದಂತೆ ತೆರೆಯಮರೆಯಲ್ಲಿ ಏನು ನಡೆದಿದೆಯೋ ಯಾರಿಗೆ ಗೊತ್ತು ? ಬೆಕ್ಕು ಹತ್ತಾರುಸಲ ಕದ್ದು ಹಾಲು ಕುಡಿದರೂ ಒಂದು ಸಲವಾದರೂ ಸಿಕ್ಕಿ ಬೀಳದೆ ಇರುತ್ತದೆಯೇ ? ರಾಮಚಂದ್ರನೂ ತುಳಸಿಯೂ ಒಂದು ಸಲ ಸರಸಸಲ್ಲಾಪದಲ್ಲಿ ಮಗ್ನರಾಗಿದ್ದಾಗ ಮ್ಯಾನೇಜರ್ ಮಹಾಶಯರು ಕಂಡೇಬಿಟ್ಟರು ತನ್ನ ಒಬ್ಬಳೇಮಗಳು ತಪ್ಪುದಾರಿ ತುಳಿದಿರುವಳೆಂದು ಅವರು ತೀರ್ಮಾನಿಸಿದರು ಹೋಗಲಿ ಮ್ಯಾನೇಜರರ ಮಗಳಾದುದರಿಂದ ಯಾರಿಗೂ ಬಾಯಿ ಬಿಡುವ ಧೈರ್ಯವಾಗಲಿಲ್ಲ ಆದರೆ ರಾಮಚಂದ್ರನ ಪಾಡು ? " ಗಂಡಾ, ಪಾಪ, ಗತಿಯಿಲ್ಲವೆಂದು ನಿನ್ನನ್ನು ಹೋಟೆಲ್ಲಿ ಸಂಬಳಕ್ಕಿಟ್ಟುಕೊಂಡರೆ ಸಲಿಗೆ ಕೊಟ್ಟರೆ ನಾಯಿ ನೊಸಲು ನೆಕ್ಕುವಂತೆ' ನನ್ನ ಮಗಳನ್ನೇ ಬಯಸಿದೆಯಾ ? ನೀಚ ' ಎಂದು ಹೇಳಿ ಆತನನ್ನು ಹೊರಗೆ ಹಾಕಿಬಿಟ್ಟರು

ಇಷ್ಟಾಗಿಯೂ ರಾಮಚಂದ್ರ ಬಹಳ ಸಾತ್ವಿಕ ಪ್ರಾಣಿ ನಾಲ್ಕು ಊರು ತಿರುಗಿ ಹೋಟೆಲ್, ಸಿನೇಮಾ, ವೇಶ್ಯಾಗೃಹ ಮುಂತಾದ ವಾತಾವರಣಗಳಲ್ಲಿ ಕಲಿತು ಈಗ ಮಾತ್ರ ಪೋಲಿಯಾಗಿಬಿಟ್ಟಿದ್ದಾನೆ ಸುಳ್ಳು ಹೇಳುವುದು, ಕಳ್ಳತನ

ಮಾಡುವುದು, ಸಿನಿಮಾನಟಿಯರ ಭಾವಚಿತ್ರಗಳನ್ನು ಕೂಡಿಹಾಕುವುದು, ಕಂಡ ಮಾನಿನಿಯರನ್ನೆಲ್ಲಾ ಕಾಮುಕ ಕಣ್ಣಿನಿಂದ ನೋಡುವುದು, ಅದೇ ಕೀಳು ಬಯಕೆಯಿಂದ ಬೇಡದ್ದನ್ನು ಕಲ್ಪಿಸಿ ಮಾತನಾಡುವುದು ಎಲ್ಲಾ ಅಭ್ಯಾಸ ಮಾಡಿದ್ದ ಈ ಜೇಡರ ಬಲೆಯಲ್ಲಿ ರಾಮಚಂದ್ರ ಸೊಣವಾಗಿ ಬಿದ್ದನು ಈತನ ಈ ವಿಧದ ವರ್ತನೆಯಿಂದ ಬೇರಲ್ಲೂ ಕೆಲಸವೇ ದೊರಕಲಿಲ್ಲ ಇನ್ನುಳಿದುದು ಒಂದೇ ದಾರಿ ಊರಿಗೆ ಹೊರಡುವುದು! ಕಿವಿಯ ಒಂಟಿಯ ಜೊತೆ, ಸೊಂಟದ ಉಡಿದಾರ ಮುಂತಾದುವನ್ನೆಲ್ಲ ಮಾರಿ ತನ್ನ ಊರ ಕಡೆಗೆ ಬಂದನು ಅದೇ ನಾವು ಊಟ ಮಾಡುತ್ತಿರುವಾಗ ಆಗ ತಾನೆ ಹಂಪೆಯಿಂದ ಅವನು ಬಂದುದು

ಅವನು ಇಲ್ಲಿಗೆ ಬಂದ ಮೇಲೆ ಹಿಂದಿನಿಂದ ತಿಳಿದು ಬಂದ ಗಾಳಿವರ್ತಮಾನವೇನಂದರೆ ಮ್ಯಾನೇಜರನ ಮಗಳು ತುಳಿಸಿ ಗರ್ಭಿಣಿಯೆಂದು ಅವರಿಗೊಂದು ನೆವ ಮಾತ್ರ ನಮ್ಮ ರಾಮಚಂದ್ರ ಆದರೆ ಆ ಗಂಡುಬೀರಿ ಹುಡುಗಿ ಹೊಟೆಲಿಗೆ ಬರುವ ನೂರಾರು ಜನರಲ್ಲಿ ಯಾರ ಸಹವಾಸ ಮಾಡಿಕೊಂಡಳೋ ಹೇಳಲು ಬರುವುದಿಲ್ಲ ರಾಮಚಂದ್ರನಂತೂ ಈ ತಪ್ಪುಗಾರಿಕೆಯನ್ನು ಒಪ್ಪಲೊಲ್ಲ

ಅವನು ನಮ್ಮ ದೊಡ್ಡಮ್ಮನಲ್ಲಿ ಮೇಲೆ ನಡೆದ ಎಲ್ಲಾ ಸಂಗತಿಗಳನ್ನೂ ಹೇಳಿ ಗಳಗಳನೆ ಅತ್ತುಬಿಟ್ಟನು ನಮ್ಮ ದೊಡ್ಡಮ್ಮ ಹೇಳಿದಳು 'ಮಗು ನಿನ್ನ ದುರದೃಷ್ಟ ನೋಡಿದರೆ ನನಗೆ ಕಣ್ಣು ತುಂಬಿ ಬರುತ್ತದೆ ನೀನೂ ನಿನ್ನ ತಮ್ಮನೂ ಊರಿನಲ್ಲಿದ್ದುಕೊಂಡು ಇದ್ದ ನೆಲವನ್ನೆಲ್ಲಾ ರೂಢಿಸಿಕೊಂಡಿದ್ದರೆ ನೀವಿಬ್ಬರೂ ಯಾರಿಗೆ ಕಡಿಮೆಯುವರಾಗುತ್ತಿದ್ದಿರಿ? ಅರಸು ಮಕ್ಕಳಂತೆ ಮೆರೆಯುತ್ತಿದ್ದಿರಿ ನಾನು ಈ ಮೊದಲೇ ಹೇಳಿದ್ದೆ, ಹೋಟೆಲ್ ಕೆಲಸ, ಅಡಿಗೆಯ ಕೆಲಸ ಇವು ನಮಗೆ ಹೇಳಿದುವಲ್ಲ ಇವುಗಳಿಂದೇನೂ ಸುಖವಿಲ್ಲ ಮರ್ಯಾದೆಯೂ ಇಲ್ಲ ನೀನು ನನ್ನ ಮಾತು ಕೇಳಲಿಲ್ಲ ಈಗ ನೋಡು ಭಾಗೀರಥಿಯಂತಹ ಗಯ್ಯಾಳಿ, ತುಳಸಿಯಂತಹ ಗಂಡುಬೀರಿ ಈ ಪ್ರಪಂಚದಲ್ಲಿಲ್ಲವೆಂದಲ್ಲ ಅವರೇ ನಿನ್ನನ್ನು ಕೆಟ್ಟ ಕೆಲಸಕ್ಕೆ ಪ್ರೇರೇಪಿಸಿರಬಹುದು ಆದರೆ ನೀನು ನಿನ್ನ ನಿಲುವು, ನೀತಿಯೇನೆಂದು ಯೋಚಿಸಿದೆಯಾ? ಜನರಿಗೇನಿಲ್ಲ ಸಣ್ಣ ವಿಷಯವಾದರೂ ಸಿಕ್ಕಿದರೆ ಸಾಕು, ಕಡ್ಡಿಯಿದ್ದುದನ್ನೇ ಗುಡ್ಡವಾಗಿ ಮಾಡುತ್ತಾರೆ ಕೆಲವು ವೇಳೆಯಂತೂ ಮಾಡಿದವನ ಪಾಪ ಆಡಿದವನ

ಮೇಲೆಂಬಂತೆ ಕೆಟ್ಟ ಕೆಲಸ ಮಾಡುವವರು ಯಾರೋ, ಕೆಟ್ಟ ಹೆಸರು ಯಾರಿಗೋ ಪ್ರಾಪ್ತವಾಗಿಬಿಡುತ್ತದೆ ನಿನಗೆ ಯಾಕೆ ಬೇಕಿತ್ತಪ್ಪ ಇದೆಲ್ಲ? ಆ ಮ್ಯಾನೇಜರ್ ನಿನ್ನನ್ನು ಜೀವಂತ ಬಿಟ್ಟಿದೇ ಅದೃಷ್ಟವೆಂದುಕೋ ಈಗ ಜನ ನಿನಗೆ ಕವಡೆ ಬೆಲೆ ಕೊಡುತ್ತಾರೇನು? ನಾಳೆ ಬೆಳಗಾದರೆ ಒಂದು ಮುರುಕ ಮನೆಯಲ್ಲಿ ನಿನ್ನದೇ ಯೋಗ್ಯವಾದ ಗೆಯ್ಮೆಯ ಗಂಜೀ ಬೇಯಿಸಿ ಉಣ್ಣು ಆಗ 'ಓಹೋ, ರಾಮಚಂದ್ರಯ್ಯನವರೋ' ಎಂದೆಲ್ಲ ಮಾತನಾಡಿಸದಿದ್ದಾರೇ? ನಾನು ಹೇಳಿದುದು ಹೌದೋ ಅಲ್ಲವೋ ಯೋಚಿಸಿ ನೋಡು ಇಂದಿಗೆ ನೀನೊಬ್ಬ ಸಭ್ಯಸ್ತನಾಗಿ ಸ್ವತಂತ್ರ ಗೆಯ್ಮೆಯವನಾಗಿದ್ದಲ್ಲಿ ನನಗೊಬ್ಬಳು ಮಗ-ಳಿದ್ದಲ್ಲಿ ನಿನಗೇ ಕೊಡುತ್ತಿದ್ದೆ ಆಗಲಿ, ಇನ್ನಾದರೂ ಬುದ್ಧಿ ತಂದುಕೊಂಡು ಊರಿಗೆ ಹೋಗಿ ಹಾಳು ಬಿದ್ದ ನೆಲವನ್ನು ಕೃಷಿ ಮಾಡು ಸದ್ಯ ವೆಚ್ಚಕ್ಕೆ ಬೇಕಾದರೆ ನಮ್ಮ ಸೂರ್ಯನಾರಾಯಣನಿಂದ ತೆಗೆದುಕೋ ಬೆಳೆ ಬಂದ ಮೇಲೆ ಹಿಂದಿರುಗಿಸುವಿಯಂತೆ ಇನ್ನೆಂದಿಗೂ ಈ ಹುಚ್ಚು ಕೆಲಸಕ್ಕೆ ಕೈ ಹಾಕಬೇಡ ಚಿಂತೆಯೇ ಮುಪ್ಪು, ಸಂತೋಷವೇ ಯೌವನ ಮತ್ತೇನಾದರೂ ಭಾಗೀರಥಿ ತುಳಸಿಯೆಲ್ಲರ ಯೋಚನೆ ತಲೆಯಲ್ಲಿದೆಯೇ? ಹೇಗೆ ಹೇಳು' ಎಂದಳು

ಖಿನ್ನ ಮನದಿಂದ 'ಇಲ್ಲ ಅತ್ತೆ ಒಮ್ಮೆ ಮನಸ್ಸು ಕೆಟ್ಟು ಸಡಿಲಾಯಿತು ತುಳಸಿಯೂ ತನ್ನ ಥಳಕು ಬೆಳಕಿನಿಂದ, ಒನಪು ಒಯ್ಯಾರದಿಂದ, ಬೆಡಗು ಬಿನ್ನಾಣಗಳಿಂದ ನನ್ನನ್ನು ಹುಚ್ಚನನ್ನಾಗಿ ಮಾಡಿದಳು ಆ ತಾಯಿ ಮಗಳ ಕಥೆ ಏನು ಹೇಳುತ್ತೀ? ಹೀಗೆ ಎಷ್ಟು ಜನರಿಗೆ ನಾಂಕು ಬೂದಿ ಹಚ್ಚಿದ್ದರೋ ಏನೋ! ನಾನಾದರೂ ಶ್ರೀಮಂತನೆಂದು ಅವರು ಕೈ ಚಾಚಲಿಲ್ಲ ನನಗೆ ಕೇಡು ಮಾಡಿದ್ದು ಅದೇ ನನ್ನ ಮೈಕಟ್ಟು ನನ್ನ ಅಂಗ ಸೌಷ್ಠವಕ್ಕೆ ಅವಳು ಮೋಹಿಸಿ ನನ್ನನ್ನು ಸೇರಿದ ಬಿಸ್ಕಳು ನಾವು ಮನಸಾ ಒಂದಾದೆವು ಆದರೆ ಅವಳ ಗರ್ಭಧಾರಣೆಗೆ ಸಾವಿರ ಸತ್ಯವಾಗಿಯೂ ನಾನು ಕಾರಣನಲ್ಲ " ಎಂದ ನಮ್ಮ ರಾಮಚಂದ್ರ

'ಏನೇ ಇರಲಿ ಅಡಿಕೆ ಕದ್ದವನೂ ಕಳ್ಳ, ಆನೆ ಕದ್ದವನೂ ಕಳ್ಳ' ಎಂದು ನೀನು ಕೇಳಿಲ್ಲವೇ? ಆ ವಿಷಯ ಇನ್ನು ಮರೆತುಬಿಡು ಊರಿನಲ್ಲಿ, ಸುಖ-ದಿಂದಿರು. ಮುಂದೆ ಒಳ್ಳೆಯ ಕಡೆಯಿಂದ ಹೆಣ್ಣನ್ನೂ ತರಿಸುವ ಏರ್ಪಾಡು ಮಾಡೋಣವಂತೆ. ನೀನು ಕಷ್ಟಪಟ್ಟು ಹಣ ಸಂಪಾದಿಸು, ಮತ್ತು ಸಾಧ್ಯ

ವಿದ್ದಷ್ಟು ಉಳಿಸಿಕೊಂಡು ನನ್ನಲ್ಲಿ ಕೊಡು ನನಗದರಿಂದ ಒಂದು ಚಿಕ್ಕಾಸೂ ಬೇಡ ಅದನ್ನು ದೇವರ ಹಣದಂತೆ ಕಾದಿಡುತ್ತೇನೆ ನಮ್ಮೊಂದಿಗರು ಹಾಳಾ ಗುವುದು ನನಗೆಂದಿಗೂ ಸಹಿಸದು ನೀನು ಮನೆ ಮಾಡಿಕೊಂಡಿದ್ದರೆ ಎಂದಾದ ರೊಮ್ಮೆ ಆ ದಾರಿಯಿಂದ ಬಂದಾಗ ಒಂದು ಹೊತ್ತು ಇಳಿದುಕೊಂಡೇನಂತೆ" ಎಂದು ದೊಡ್ಡಮ್ಮ ಸಮಾಧಾನ ಹೇಳಿದಳು

ರಾಮಚಂದ್ರನಿಗೆ ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಸುರಿಯಿತು ಅತ್ತೆ ನೀನು ನಿಜವಾಗಿಯೂ ನನ್ನ ತಾಯಿ ತಾಯಿಗಿಂತಲೂ ಬೇರೆಯಲ್ಲ ನೀನು ನನ್ನ ಈಗಿನ ಸ್ಥಿತಿಯಲ್ಲಿ ಕೆಲವು ದಿನ ನನಗೆ ಅನ್ನ ಹಾಕಿ, ಪಥ್ಯಪಾನಮಾಡಿಸಿ ನನ್ನನ್ನು ಒಮ್ಮೆ ಮನುಷ್ಯವರ್ಗಕ್ಕೆ ನೀನೇ ಸೇರಿಸಬೇಕು ಮತ್ತೆ ನೀನು ಹೇಳಿದಂತೆಯೇ ಮಾಡುತ್ತೇನೆ 'ಹೆಂಗಸರ ಬುದ್ಧಿ ಮೊಳಕಾಲು ಕೆಳಗೆ' ಎಂದು ಹೇಳುವ ಜನರು ನಿಜವಾಗಿಯೂ ಮೂಢರು ಇಂದಿನವರೆಗೆ ನನ್ನ ಮನೆ, ಗದ್ದೆ ತೋಟಗಳ ಕಡೆಗೆ ನನ್ನ ಮನಸ್ಸು ಹರಿಯಲೇ ಇಲ್ಲ ಇದನ್ನು ಮನ ಮುಟ್ಟುವಂತೆ ಮಾಡಿದ ನೀನೇತಾಯಿ' ಎಂದು ಅತ್ತುಬಿಟ್ಟನು

ನನ್ನ ದೊಡ್ಡಮ್ಮ ಮತ್ತೆ ಹೇಳಿದಳು, ರಾಮಚಂದ್ರ ಇನ್ನೊಂದು ವಿಷಯ ನಾನಾಡಿದ ಇಷ್ಟೇ ಮಾತಿನಿಂದ ನಿನ್ನ ಮನಸ್ಸು ಪಕ್ವವಾಗುತ್ತದೆಂದು ನಾನು ಭಾವಿಸಲಾರೆ ಆದಶರಥರಾಜನ ಮಗ ಶ್ರೀ ರಾಮಚಂದ್ರನ ಹೆಸರನ್ನು ಸ್ಮರಿಸಿಕೋ ಆತನ ತಾಯಿ ಕೌಸಲ್ಯೆ, ಮಡದಿ ಸೀತೆಯರಂತಹ ಮಹಿಳೆಯರು ನಮ್ಮ ದೇಶದಲ್ಲಿ ಇರಲಿಲ್ಲವೇ ? ಇಂತಹ ಪವಿತ್ರ ಸ್ತ್ರೀಕುಲಕ್ಕೆ ನೀನು ಅಗೌರವ ತೋರಿಸಿದಂತಾಗಿದೆ ಈಗ ಬಹುಶಃ ಭಾಗೀರಥಿ ನನ್ನ ವಯಸ್ಸಿನವಳಿರಬಹುದು ಅವಳು ಕುಲಟೆಯಾಗಿ ನಿನ್ನನ್ನು ಕೆಟ್ಟ ಕೆಲಸಕ್ಕೆ ಪ್ರೇರೇಪಿಸಿದರೂ, ನೀನು ಅವಳ ಹತ್ತಿರ, ನೀನೂ ನಿನ್ನ ತಾಯಿ ಸಮಾನ, ಅಂದರೆ ನಿನ್ನ ಮಗಳು ನನಗೆ ತಂಗಿ ಯಾಗುತ್ತಾಳೆ' ಎಂದು ಹಿತವಚನ ನುಡಿಯಬಹುದಿತ್ತು ನೀನು ಗೈದಕಾರ್ಯದ ಹಿಂದೆ ಎಂತಹ ಅಪರಾಧವಿದೆ ನೋಡು '

ರಾಮಚಂದ್ರನು, 'ಅತ್ತೆ, ಪರನಾರಿ, ಪರಧನವನ್ನು ಖಂಡಿತವಾಗಿಯೂ ಮಣ್ಣಿಗಿಂತ ಕೀಳಾಗಿ ಭಾವಿಸಬೇಕೆಂಬ ನಿನ್ನ ಉಪದೇಶ ಹೃದಯಕ್ಕೆ ಪಥ್ಯಕರ ವಾದುದೇ ಆದರೆ ಈಗಿನ ಕಾಲದಲ್ಲಿ ಮಣ್ಣೆಂದು ಭಾವಿಸಿದ ಇಂತಹ ಕಡೆಗಳಲ್ಲಿ 'ಗಿಲ್ಟ್' ಚಿನ್ನವೇ ದೊರೆಯುತ್ತಿದೆ ಆಗೇನು ಹೇಳುತ್ತೀ ? ನನಗೇನೂ ಆಸೆ

ಇಲ್ಲವೆಂದು ಮೂಲೆಯಲ್ಲಿ ಮುದುಡಿ ಕುಳಿತರೂ ಅಮ್ಮ ಕೈಮಾಡಿ ನಮ್ಮನ್ನು ಕರೆಯುತ್ತವೆ ಈಗ ಹೆಣ್ಣು, ಹೊನ್ನು, ಮಣ್ಣುಗಳ ಆಸೆ ಬಿಟ್ಟವನೇ ನಿರುಪಯುಕ್ತ, ಅರಸಿಕ, ಕ್ಷುದ್ರಜೀವಿಯೆನಿಸುತ್ತಾನೆ ಆದರೆ ನೀನು ನುಡಿವ ಮಾತುಗಳು ಸತ್ಯ–ಸುಖದ ಸೌಧಗಳಾಗಿವೆ ನನ್ನ ಕಣ್ತೆರೆದಿವೆ ನಾನಿಂದು ಪಶ್ಚಾತ್ತಾಪದಿಂದ ಪುನೀತನಾಗಿದ್ದೇನೆ ನಿನ್ನ ಹಿತವಚನಗಳನ್ನು ಮರೆಯದೆ ಹಳ್ಳಿಯ ಮನೆಯಲ್ಲಿ ದುಡಿದುಣ್ಣುತ್ತೇನೆ, ನಾನು ಹೋಗಿಬರಲೇ ?' ಎಂದು ವಿನೀತ ಭಾವದಿಂದ ನುಡಿದನು

'ಆಗಲಿ ಮಗು ಒಳ್ಳೆಯವನಾಗಿ ಬಾಳು' ಎಂದು ದೊಡ್ಡಮ್ಮ ಹರಸಿದಳು

ಪಶ್ಚಾತ್ತಾಪ ಪುನೀತ ರಾಮಚಂದ್ರನನ್ನು ನೋಡಿ ನಾನು ಮನದೊಳಗೇ ತರ್ಕಿಸಿದೆ– "ಈತ ಖಂಡಿತ ಒಳ್ಳೆಯ ದಾರಿಗೆ ಬಂದು ಸಭ್ಯ ಗೃಹಸ್ಥನಾದಾನು"

ಹೃದಯ ಪರಿವರ್ತಿಸಿಗೊಳ್ಳುವುದೊಂದು ತಪಸ್ಸು ವಿನಾಶಕಾಲವರಿತೂ ವಿಪರೀತವಾಗಿ ವರ್ತಿಸುವವರಿಗೆ ಹೃದಯ ಪರಿವರ್ತನೆ ಅರ್ಥಹೀನ ಮಾತಾಗಿ ಕಂಡರೂ ಅದು ಎಲ್ಲರಿಗೂ ಅಸಾಧ್ಯವೆನ್ನುವಷ್ಟು ಎದೆಗಾರಿಕೆ ಯಾರಿಗೂ ಇರಲಾರದು



# ವಿಧವೆಯ ಹೃದಯ

"ಶ್ಯಾಮಲೆಯ ಗಂಡ ತೀರಿದನೇ ? ಅಯ್ಯೋ ದೇವರೇ ಗಟ್ಟಿಮುಟ್ಟಾಗಿದ್ದ ನಾತ ಮೊನ್ನೆ ಬೇಲೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಬಂದಾಗ, ನಾವೆಲ್ಲರೂ ಚಹಾಪಾನ ಮಾಡಿದ್ದೆವು ಸಮ್ಮೇಳನವು ನಡೆದಿನ್ನೂ ಆರು ತಿಂಗಳಾಗಿಲ್ಲ ಈ ಸಲ ಹೊಸ ಕಾದಂಬರಿಯೊಂದನ್ನು ಬರೆಯಬೇಕೆಂದಿದ್ದ ಪಾಪ ! ಕನ್ನಡದ ಬೆಳಕೊಂದು ನಂದಿದಂತಾಯ್ತು" ಎಂದು ಆತನ ಸ್ನೇಹಿತ ವಿಜಯ ಉದ್ಗಾರ ತೆಗೆದನು ಇನ್ನೊಬ್ಬ ಸ್ನೇಹಿತ, 'ನನಗೆ ಶ್ಯಾಮಲೆಯ ವಿಚಾರದಲ್ಲಿ ದೊಡ್ಡ ಯೋಚನೆ ಹುಟ್ಟಿದೆ ಆಕೆ ಇನ್ನೂ ಹದಿನೇಳು ವರ್ಷದ ಹುಡುಗಿ ಆಕೆಯ ಅತ್ತೆ ಮಾವಂದಿರಾದರೂ ಒಳ್ಳೆಯವರೇ ? ಸೊಸೆಯನ್ನು ಯಾವಾಗಲೂ ಗೋಳು ಹೊಯ್ಕೋತಾರೆ ಆಕೆ ಎಷ್ಟು ದುಡಿದರೂ ಅವರಿಗೆ ಸಮಾಧಾನವಿಲ್ಲ ಈಗಂತೂ ಮಗ ತೀರಿದುದರಿಂದುಂಟಾದ ದುಃಖದಿಂದ ಆಕೆಯನ್ನು ಗೋಳಾಡಿಸದೆ ಬಿಡರು' ಎಂದರು

*    *    *    *

ರಾಮಕೃಷ್ಣರಾಯರ ಮಗ ರಾಜೀವ ಈತನಿಗೆ ಸುಬ್ಬರಾಮಯ್ಯನವರ ಮಗಳು ಶ್ಯಾಮಲೆಯನ್ನು ಕೊಟ್ಟು ವಿವಾಹವಾಗಿತ್ತು ರಾಜೀವ ಬಿ ಎ ವರೆಗೆ ಓದಿದವನು ಅತ್ಯಂತ ಮೇಧಾವಿ ರಾಜಕೀಯ ರಂಗದಲ್ಲೂ ಹಾಸುಹೊಕ್ಕಾಗಿ ಸೇರಿಕೊಂಡಿದ್ದನು ಕಾಂಗ್ರೆಸ್ಸಿಗೆ ಸೆರೆಮನೆಯ ಸುಖವನ್ನು ಕೆಲವು ಬಾರಿ ಕಂಡ ಹೆಗ್ಗಳಿಕೆ ಬೇರೆ ಅವನ ಪಾಲಿನದಾಗಿತ್ತು ಕ್ರಾಂತಿ ಪ್ರಿಯನಾದ ಅವನ ಕ್ರಾಂತಿ ಸಾಹಿತ್ಯ ಜನಜೀವನದಲ್ಲಿ ಕ್ರಾಂತಿ ಶೀಲತೆಯನ್ನು ಮೂಡಿಸಿತ್ತು ಅವನದು ಸರಳ ಜೀವನ ಉದಾತ್ತ ಉದ್ದೇಶ ! ಶ್ಯಾಮಲೆ ಆತನಿಗೆ ಅನುವರ್ತಿಯಾಗಿ ಹೊಂದಿಕೊಂಡು ಅವನ ಬಾಳು ಬೆಳಗಲು ಬಂದ ಭಾಗ್ಯ ಶ್ರೀ ಆದೇ ಆತನಿಗೆ ಆಕೆಯೆಂದರೆ ಪ್ರಾಣಕ್ಕಿಂತಲೂ ಮಿಗಿಲಾಗಿದ್ದಳು ಆದರೆ ಆತನ ಮಾತಾ-ಪಿತೃಗಳು ಹಿಂದಿನ ಕಾಲದ ಜನ ಮಗನ ಯಾವ ಕಾರ್ಯಗಳಲ್ಲಿಯೂ ಅವರಿಗೆ ಅನಭಿರುಚಿ ಸೊಸೆಯೆಂದರಂತೂ ಉರಿದುಬೀಳುತ್ತಿದ್ದರು ಮನೆಗೆಲಸವನ್ನೆಲ್ಲ

*ಬಹುಮಾನ ಪಡೆದ ಕತೆ.

ಬೇಗ ಬೇಗನೆ ಮುಗಿಸಿಟ್ಟು ಗಂಡನ ಕೋಣೆಯಲ್ಲಿ ಕುಳಿತು ವೀಣೆ ಬಾರಿಸು-ವುದು, ಸ್ವರವೆತ್ತಿ ಹಾಡುವುದು ಮತ್ತೆ ಆಗಾಗ ಅವನು ಬರೆದ ಕತೆ, ಕಾದಂಬರಿ ಓದುವುದು, ಹಣೆಯಲ್ಲಿ ನಣ್ಣದಾದ ಕುಂಕುಮದ ಬೊಟ್ಟು ಇಡುವುದು ಚಿನ್ನ ಬೇಡ, ಬಣ್ಣ ಬೇಡ ಬಣ್ಣದ ಬೀಸಣಿಕೆಯಂತೆ ಮೆರೆಯುವುದು ಮಡಿ ಮೈಲಿಗೆ ಹೋದ ದಾರಿಗೇ ಇಲ್ಲ! ಇದನ್ನೆಲ್ಲಾ ಆ ಹಳೆಗಾಲದ ಹೆಂಗಸು ಹೇಗೆ ಸಹಿಸಿ ಕೊಂಡಿದ್ದಾಳು? ರಾಮಕೃಷ್ಣರಾಯರು ದಿನವೆಲ್ಲ ಸ್ನಾನ, ಜಪ-ಸಂಧ್ಯಾವಂದನೆ ಮುಂತಾದವುಗಳಲ್ಲೆ ಕಾಲ ಹರಣ ಮಾಡುವವರು ರಾಮಾಯಣ, ಮಹಾ ಭಾರತ, ಭಗವದ್ಗೀತೆ ಮುಂತಾದುವೇ ಇವರಿಗೆ ದೊಡ್ಡ ಸಾಹಿತ್ಯ ಸಂಪತ್ತು, ಅವರ ಮನೆಯಾಕೆ ಸರಸ್ವತಿಯಮ್ಮ ಅವರ ಪಾಲಿಗೆ ಗೃಹಲಕ್ಷ್ಮಿಯೇ ಅವಳ ಮಾತು ಮೀರಬಾರದು ಅದೇ ಆ ಹಕ್ಕು ಶ್ಯಾಮಲೆಯ ಪಾಲಿಗಿರಲಿಲ್ಲ ಆಕೆ ತನ್ನ ಸಹಜವಾದ ನಿಷ್ಕಲ್ಮಷ ಪ್ರೇಮದಿಂದ, ಸೌಜನ್ಯದಿಂದ ತನ್ನ ಪತಿಯನ್ನು ಸೇವಿಸಿಕೊಂಡಿರುವುದೂ ಸರಸ್ವತಿಯಮ್ಮನಿಗೆ ಸಹಿಸಲಸಾಧ್ಯವಾದ ತಲೆಶೂಲೆ! ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ

ಶ್ಯಾಮಲೆ ಹದಿಮೂರು ವರ್ಷದವಳಿರುವಾಗಲೇ ಆಕೆಯ ಮದುವೆಯಾ-ಗಿತ್ತು ಅಂದಿನಿಂದ ನಾಲ್ಕು ವರ್ಷಗಳ ಕಾಲ ಗಂಡನ ಮನೆಯ ಸುಖವುಂಡಿದ್ದಳು ಗಂಡನನ್ನು ಬಿಟ್ಟರೆ ಆ ಮನೆಯಲ್ಲಿ ಅವಳಿಗೆ ಆತ್ಮೀಯರಾದವರು ಇರಲೇ ಇಲ್ಲ ಅದೇ ಆಕೆಗೆ ತುಂಬ ಬೇಸರ ಹೊರಗೆ ಹೊರಟರೆ ಕೊಂಕು ನುಡಿ, ಮನೆಯಲ್ಲಿದ್ದರೆ ಮೈತುಂಬ ಕೆಲಸ ಯಾರೊಡನಾದರೂ ಮಾತಿಗೆ ಕುಳಿತರೆ ಮಾತಿನಮಲ್ಲಿ ಎಂದು, ಸುಮ್ಮನಾದರೆ ಮೂದೇವಿ ಮೈತುಂಬ ಬಟ್ಟೆ ತೊಟ್ಟರೆ ವೈಯಾರಿ ಅಲಂಕಾರ ಮಾಡಿಕೊಂಡರೆ 'ಯಾರನ್ನೋ ಮೆಚ್ಚಿಸ-ಲಿಕ್ಕೆ ' ಎಂದು ಅತ್ತೆಯ ಚುಚ್ಚು ಮಾತಿನ ಚೇಳು ಬಾಣ ಅವಳ ತಂದೆ ಸುಬ್ಬರಾಮಯ್ಯನವರು ಬಡವರು ಅವರ ಹೆಂಡತಿ ರಾಧಮ್ಮ ಒಳ್ಳೆಯ ಹೆಂಗಸು ಶ್ಯಾಮಲೆಯಂತಹ ಸುಕುಮಾರ-ಕುಮಾರಿಯರನ್ನು ಹಡೆದ ಆ ಕರುಳು ಎಷ್ಟು ಮೆತ್ತಗಿರಲಾರದು?

ರಾಜೀವನಿಗೆ ತನ್ನ ಶ್ರೀಮಂತಿಕೆಯ ಅರಿವಿದ್ದರೂ ಅವನಲ್ಲಿ ಗರ್ವ ಅಹಂಭಾವಗಳಿರಲಿಲ್ಲ ಆತನಿಗೆ ಅತ್ತೆಯೆಂದರೆ ಅನುಪಮ ಭಕ್ತಿ ಮಾವ-ನೆಂದರೆ ಅತೀವ ಗೌರವ ಮನೆತನದ ಗೌರವಕ್ಕೆ ತಟ್ಟಿದ ಬಡತನ ಅವರಿಗೆ ಇದ್ದರೇನು? ಎಂಬ ವಿಚಾರ ಅವನದು

"ನಿಮ್ಮ ಶಾಮಲೆಯಿಂದ ನಮ್ಮ ಮನೆ ತುಂಬಿತು ಆಕೆ ನಮ್ಮ ಮನೆಯ ನಂದಾದೀಪ ಎಂದಾತ ಎದೆತುಂಬಿ ಅವರಲ್ಲಿ ಎಷ್ಟೋ ಸಲ ಹೇಳಿದ್ದ ಅವನ ಆ ಮಾತು ಅವನಲ್ಲಿ ಅವರಿಗಿರುವ ವಾತ್ಸಲ್ಯವನ್ನು ಹೆಗ್ಗಳಿಸಿತ್ತು

ಎಷ್ಟೋ ಸಲ ಅವನ ತಾಯಿ ಸರಸ್ವತಿಯಮ್ಮ 'ಹೆಂಡತಿಯನ್ನು ನೀನು ತಲೆಯ ಮೇಲೆ ಹೊತ್ತುಕೊಂಡಿರುವೆ ಆಕೆ ಏನು ಮಾಡಿದರೂ ನಿನಗೆ ಸಂತೋಷವೇ ಕಾಲಗತಿ ಬದಲಾದಾಗ ನಮ್ಮ ಮಾತಿಗೆ ಎಲ್ಲಿ ಮರ್ಯಾದೆ ಬರುತ್ತದೆ ' ಎಂದು ಚುಚ್ಚಿದಾಗ ಆತನೂ ಇದಿರಾಡಿ ಮಡದಿಯ ಪರವಾಗಿ ವಾದಿಸಿದ್ದ "ಅಂತಹ ಹೂವಿನ ಹೃದಯದ ಹೆಣ್ಣಿನ ಮನ ನೋಯಿಸಬೇಡಮ್ಮ ಅವಳು ನಮ್ಮ ಸಂಸಾರದ ಬೆಳಕು ' ಎಂದೂ ಅಭಿಮಾನದಿಂದ ಹೇಳಿದ್ದ

* * * *

ಒಂದೆರಡು ತಿಂಗಳುಗಳಿಂದ ರಾಜೀವ ಮನೆಯಲ್ಲಿದ್ದಿಲ್ಲ ಸಾಹಿತ್ಯ ಸಮ್ಮೇಲನ, ಆಹಾರ ಸಮ್ಮೇಳನ, ಸಾಂಸ್ಕೃತಿಕ ಸಮ್ಮೇಳನ ಎಂದು ಮುಂತಾಗಿ ಊರೂರು ತಿರುಗಾಡಲು ಹೋಗಿದ್ದ ಮತ್ತು ಹಲವುಕಡೆಯ ನೀರು ಹವಾ ಗುಣ ಅವನ ಸೂಕ್ಷ್ಮ ಪ್ರಕೃತಿಯ ಮೇಲೆ ಬೇಗನೆ ಪ್ರಭಾವ ತೋರಿಸಿತು ಒಬ್ಬ ಡಾಕ್ಟರ್ 'ಟೈಫಾಯಿಡ್' ಎಂದಾಗ ಇನ್ನೊಬ್ಬರು 'ಇನ್‌ಫ್ಲುಯೆಂಜಾ' ಎಂದರು ತಂದೆ ತಾಯಿಗಳಿಗೆ ಕಳವಳವುಂಟಾಯಿತು ಒಲವಿನ ಮಡದಿಗೆ ಕಾತರ ಹುಟ್ಟಿ ಕಣ್ಣೀರು ತುಂಬಿ ಚೆಲ್ಲಿತು ಆದರೂ ಆಕೆ ದೃಢಮನೋಭಾವ ದಿಂದ ಗಂಡನ ಶುಶ್ರೂಷೆಗೈದಳು

ರಾಜೀವನ ಅನಾರೋಗ್ಯದ ಬಗ್ಗೆ ಎದೆಗುದಿಗೊಂಡವರಲ್ಲಿ ಗುರುನಾಥ ನೊಬ್ಬ ಜೀವದ ಗೆಳೆಯ ಆತ ದಿನಕ್ಕೆ ಹತ್ತಾರು ಸಲ ವೈದ್ಯರಲ್ಲಿಗೆ ಹೋಗು ವುದು, ಔಷಧಿ ತರುವುದು, ಪ್ರಕೃತಿಯಲ್ಲುಂಟಾದ ಬದಲಾವಣೆಗಳನ್ನು ಗುರ್ತಿಸಿ, ಗಮನಿಸುವದು– ಇವೇ ಮೊದಲಾದ ಕೆಲಸಗಳನ್ನು ಮಾಡಿ ಆತ ತನ್ನ ಗೆಳೆತನದ ನಿಷ್ಕಲಂಕ ಹೃದಯವನ್ನು ತೆರೆದು ತೋರಿದನು

ಆದರೆ ಅನಿರೀಕ್ಷಿತವಾಗಿ ಒಂದು ಪ್ರಭಾತ ಸಮಯದಲ್ಲಿ ರಾಜೀವ ಕಣ್ಣು ಮುಚ್ಚಿದನು ಹೂ ಅರಳುವ ಕಾಲದಲ್ಲಿಯೇ ಮುದುಡಿಕೊಂಡಿತು ಆತನ ಸಂಸಾರದ ಸಂತಾಪಕ್ಕೆ ತುದಿಮೊದಲಿಲ್ಲ ಆತನ ಅನಿರೀಕ್ಷಿತ ಮರಣ ಒಂದು ವಜ್ರಾಘಾತವೇ ಆಗಿ ಪರಿಣಮಿಸಿತು ಶ್ಯಾಮಲೆ ಬಾಳ ಬೀದಿಯಲ್ಲಿ ಬಸವಳಿದು ಬಿದ್ದಳು. ಅವಳ ಸಂಕಟ . ಅದು ಬಣ್ಣನೆಗೆ ಮೀರಿದ ಭಾವನೆ ...

ಮತ್ತೆ ಶ್ಯಾಮಲೆಯ ಜೀವನದಲ್ಲಿ ಇರುಳು ಮುತ್ತಿತು ತವರುಮನೆ-ಯವರು ಉತ್ತಮ ಸ್ಥಿತಿಯಲ್ಲಿದ್ದಾರೆಯೇ? ಹೊತ್ತಿಗೆ ಸರಿಯಾಗಿ ಊಟವಿಲ್ಲದೆ ದಿನ ದೂಡುವ ಸಂಸಾರ ಜೀವನ ಅವರದು ಆದರೂ ಆ ಹೃದಯ 'ಮಗಳಾ-ದರೂ ಸುಖದಿಂದಿರಲಿ ' ಎಂದು ಆಶಿಸಿದ್ದುವು ಆ ಆಸೆ ಈಗ ಮಣ್ಣುಗೂಡಿತು ಮಗಳಿಗೊದಗಿದ ವೈಧವ್ಯ ಅವರ ದುಃಖವನ್ನು ಪರಮಾವಧಿಗೇರಿಸಿತು

ರಾಜೀವನ ಜೀವದ ಗೆಳೆಯನಾದ ಗುರುನಾಥ, ಆಗಾಗ ಅವನ ಮನೆಗೆ ಬಂದು ಹರಟೆಹೊಡೆದುಕೊಂಡೋ ಚರ್ಚೆ ಮಾಡಿಯೋ ಹೊತ್ತು ಕಳೆದು ಕೊನೆಗೆ ರಾಜೀವನೊಂದಿಗೆ ಚಹಾ ಕುಡಿದು ಇಬ್ಬರೂ ಒಟ್ಟಿಗೆ ತಿರುಗಾಟಕ್ಕೆ ಹೋಗುತ್ತಿದ್ದರು ಆತ ಹೊಸ ಬಾಳಿನ ಹುಮ್ಮಸಿಗ ಸಮಾಜ ಸಾಹಿತ್ಯ ಸೇವೆಗಳ ಕಾಂಕ್ಷಿ ಸಾಮಾಜಿಕ ಕ್ರಾಂತಿಯ ಉತ್ಕಟೇಚ್ಛು ಮತ್ತು ಹಿರಿಯಾಳು ವಿನ ಹೃದಯವುಳ್ಳ ಗಂಡು ರಾಜೀವನ ಮರಣದಿಂದುಂಟಾದ ಕೊರತೆ, ಶ್ಯಾಮಲೆಯ ಅತ್ತೆಮಾವಂದಿರ ವರ್ತನೆಯರಿತಿದ್ದ ಆತನಿಗೆ ಶ್ಯಾಮಲೆಯ ದುಃಖದ ಒರತೆ ಚಿಂತೆಗೆ ದಾರಿ ಮಾಡಿಕೊಟ್ಟವು

ಗುರುನಾಥ ಶ್ಯಾಮಲೆಯನ್ನು ನೋದರಿಯಂತೆ ತುಂಬುಹೃದಯದ ವಾತ್ಸಲ್ಯದಿಂದ ಕಾಣುತ್ತಿದ್ದನು ಅವಳ ಗಂಡ ರಾಜೀವ ಇದ್ದಾಗ ಗುರುನಾಥ ನೊಡನೆ ಮಾತನಾಡುವುದು ಕ್ಷಮ್ಯ ಆದರೆ ಈಗ? ಹಾಗೆಂದು ಆ ಪ್ರೇಮಲ ಹೃದಯದ ಕರುಣಾಮೂರ್ತಿಯೊಡನೆ ಮಾತನಾಡದಿರುವುದೆಂತು? ಶ್ಯಾಮಲೆಗೂ ಆತ್ಮೀಯ ವ್ಯಕ್ತಿಯೆಂದರೆ ಗುರುನಾಥನೇ ಮೆಟ್ರಿಕ್ಯುಲೇಶನ್ ಮುಗಿಸಿದ, ಕಲಿತ ಹೆಣ್ಣು ಎಷ್ಟು ಕಾಲವೆಂದು ಮನೆಯ ಮೂಲೆಯ 'ಕತ್ತಲ ಜೀವನ' ಕೈಕೊಂಡಾಳು? ಆಕೆ ಒಳ್ಳೆಯ ಗುಣವನ್ನು ವ್ಯವಸಾಯ ಮಾಡಿದ್ದಳು

ಉತ್ತಮ ವಿದ್ಯೆ, ವಿನಯದೊಂದಿಗೆ ಎಣೆಯಿಲ್ಲದ ರೂಪ ಶ್ಯಾಮಲೆಯದು ಈ ಮೂರು ಗುಣವೈಶಿಷ್ಟ್ಯಗಳ ನಿಧಿ ಯಾರಿಗೆ ತಾನೇ ಆಕರ್ಷಕವಾಗದಿದ್ದೀತು? ಶ್ಯಾಮಲೆಗೂ ಅಷ್ಟೇ ತನ್ನದೆನ್ನುವ ಆತ್ಮೀಯ ವ್ಯಕ್ತಿ ಗುರುನಾಥನೊಬ್ಬನೇ ಎಂದವಳ ಎಣಿಕೆ ಅದೇ ಆತನನ್ನು ಕಂಡು ಮಾತನಾಡಲೆಂದೇ ಆಕೆ ಆಗಾಗ ಆತನಲ್ಲಿಗೆ ಹೋಗಿ ಓದುವ ಪುಸ್ತಕಗಳನ್ನು ಎರವಲು ತರುತ್ತಿದ್ದಳು

ಶ್ಯಾಮಲೆಯ ಅತ್ತೆಮಾವಂದಿರಂತಹ ಸಂಶಯ ಪಿಶಾಚಿಗಳು ಶ್ಯಾಮಲೆ ಮತ್ತು ಗುರುನಾಥ ಏಕಾಂತವಾಗಿ ಕೋಣೆಯಲ್ಲಿದ್ದಾಗ ಹೇಗಿರುತ್ತಾರೆಂದು

ನೋಡಬೇಕಾಗಿತ್ತು ಅವಳಿನ್ನೂ ಹದಿನೇಳು ವರ್ಷದ ನವತರುಣಿ ಗುರು-ನಾಥನ ಸ್ಥಾನದಲ್ಲಿ ಇನ್ನಾರಾದರೂ ಇದ್ದಿದ್ದರೆ ಅವರು ತಮ್ಮ ವಿವೇಕವನ್ನು ಖಂಡಿತವಾಗಿ ಕಳೆದುಕೊಳ್ಳುತ್ತಿದ್ದರು ಆದರೆ ಆತ ಮತ್ತು ಈಕೆ ಎಷ್ಟು ನಿಷ್ಕಲ್ಮಶ ನಿಷ್ಕಳಂಕ ಪ್ರೇಮ ವಾತಾವರಣದಲ್ಲಿದ್ದರು ! ತನ್ನ ಮಿತ್ರನ ಹೆಂಡತಿಯೆಂದರೆ ಆತನಿಗೆಷ್ಟು ಗೌರವ ? ಆಕೆ ಆತನ ಕೋಣೆಯಲ್ಲಿ ಕಾಲಿಟ್ಟಾಕ್ಷಣ-ದಲ್ಲೇ ತಾನು ಕುಳಿತಿದ್ದವನು ಎದ್ದು ನಿಂತು ಅವಳಿಗೆ ಆಸನವಿತ್ತು ಆದರಿಸಿ ಕ್ಷೇಮ ಕುಶಲಗಳನ್ನು ಕೇಳುತ್ತಿದ್ದನು ಅಕ್ಕನೋ ತಂಗಿಯೋ ಒಳಮನೆ-ಯಲ್ಲಿದ್ದರೆ ಬಾಯಾರಿಕೆಗೆ ತರಿಸುತ್ತಿದ್ದನು ಪುಸ್ತಕಗಳ ಕವಾಟವನ್ನೇ ಅವಳ ವಶಕ್ಕೆ ಒಪ್ಪಿಸಿಬಿಟ್ಟು ತಾನು ಗಂಭೀರವಾಗಿ ಮಾತಿಗೆ ಬೇಕಷ್ಟೇ ಉತ್ತರ ಕೊಡು ತ್ತಿದ್ದನು ಒಬ್ಬಳು ಎಳೆವರೆಯದ ತರುಣಿ ತನ್ನ ಮುಂದಿದ್ದಾಳೆಂದು ನಾಲಗೆ ಸಡಿಲು ಬಿಟ್ಟು ಮಿತಿಮೀರಿ ಅವನೆಂದೂ ಆಡನು ಶ್ಯಾಮಲೆಯಾದರೂ ಅಂತೇ • ಇಂತಹ ನವಮಲ ಪ್ರೇಮದ ಸುಂದರ ವಾತಾವರಣವನ್ನು ಕಣ್ಣಿನಿಂದ ಕಾಣದೆ ಅವರ ಸಂಬಂಧದಲ್ಲಿ ತಪ್ಪು ಭಾನಿಸುವುದು ಮನುಷ್ಯರಾದವರಿಗೆ ಯೋಗ್ಯವೆನಿಸ ಲಾರದು

*　　*　　*　　*

'ಮಾವ, ಅತ್ತೆ ನಿನಗೆ ಪೀಡೆ ಕೊಡುತ್ತಾರೆಯೇ ನನ್ನೊಡನೆ ಹೇಳಮ್ಮ ಸಾಧ್ಯವಿದ್ದರೆ ನಾನವರಿಗೆ ವಿವೇಕ ಹೇಳುತ್ತೇನೆ ರಾಜೀವ ನನ್ನ ಅಣ್ಣನಿಗಿಂತ ಮಿಗಿಲು, ನೀನಂತೂ ನನಗೆ ಸೋದರಿ '

ಶ್ಯಾಮಲಾ ಎಷ್ಟೋ ದಿನಗಳಿಂದಲೂ ತಾನು ಪಡುವ ಪಾಡು, ಹಿಂಸೆ-ಯನ್ನು ಬಾಯ್ದೆರೆಯಾಗಿ ಹೇಳಿರಲಿಲ್ಲ ತುಂಬ ತಾಳ್ಮೆಯುಳ್ಳ ಹುಡುಗಿ ಎಷ್ಟೋ ಕಷ್ಟ–ಕಾರ್ಪಣ್ಯಗಳ ನಡುವೆಯೂ ಆಕೆ ತಪ್ಪದೆ ಬಂದು ಪುಸ್ತಕಗಳನ್ನು ಕೊಂಡು ಹೋಗುತ್ತಿದ್ದಳು ಆದರೆ ಗುರುನಾಥನಲ್ಲಿ ಮನೆ ವ್ಯವಹಾರವನ್ನು ತೆರೆದು ತೋರಲಿಲ್ಲ

ಅತ್ತೆ ಒಂದು ದಿನ, 'ಶ್ಯಾಮಲಾ, ನೀನು ನಮ್ಮ ಮನೆಗೆ ನಾರಿಯಂತೆ ಬಂದು ಮಾರಿಯಾಗಿ ನನ್ನ ಮಗನನ್ನು ಕೊಂದೆ ಈಗ ಆ ಪೋಲಿ ಗುರುನಾಥನ ಮನೆಗೆ ಹೋಗಿ ನಮ್ಮ ಮನೆತನದ ಮುಖಕ್ಕೆ ಮಸಿ ಹಚ್ಚುತ್ತೀಯಾ ? ಕತೆ ಪುಸ್ತಕ ಓದುತ್ತಾಳಂತೆ ಯಾಕೆ ಆ ಉಂಡಾಡಿಯನ್ನು ಬಗಲಿಗೆ ಹಾಕಿ ಮೆರೀಲಿಕ್ಕೋ ಮತ್ತೆ ? ಹೀಗಾದರೆ ನಮಗಾಗದಮ್ಮ ನೀನು ತೌರಿಗೆ

ದಯಮಾಡಿಸಬಹುದು ಇಲ್ಲಾದರೆ, ಹೇಳಿದಂತೆ ಕೇಳಿಕೊಂಡು ಇಲ್ಲೇ ಬಿದ್ದಿರು ಇದರಲ್ಲಿ ಹೇಗೆ ಸುಖವೋ ನಿನ್ನ ಇಷ್ಟ ' ಎಂದು ರೇಗಿದಳು

ಅಂದಿನಿಂದ ಶ್ಯಾಮಲೆ ಬಂಧಿತಳಾದಳು ಒಂದರೆಗಳಿಗೆ ಮನೆ ಬಿಟ್ಟಿರದಾದಳು

ದಿನವೂ ತಮ್ಮ ಮನೆಗೆ ಬರುತ್ತಿದ್ದ ಶ್ಯಾಮಲಾ ಎರಡು–ಮೂರು ದಿನಗಳ ವರೆಗೆ ಬರದಿರುವುದನ್ನು ನೋಡಿ ಗುರುನಾಥನಿಗೆ ಮನಸ್ಸು ತುಂಬ ಅಸಮಾಧಾನವಾಯಿತು ತನ್ನ ವಿಷಯದಲ್ಲಿ ಕುಕಲ್ಪನೆ ಮಾಡಿಕೊಂಡು ಅತ್ತೆ ಶ್ಯಾಮಲೆಗೇನು ಮಾಡಿವಳೋ ಕುಲಟೆ! ಎಂದು ತಪ್ತ ಹೃದಯಿಯಾದನು! ತಾನೇ ಸ್ವತಃ ರಾಮಕೃಷ್ಣರಾಯರಲ್ಲಿಗೆ ಹೋಗಿ ವಿಷಯವನ್ನು ತಿಳಿದು ಬರಬೇಕೆಂದು ಆಗಲೇ ಅಲ್ಲಿಗೆ ಕಾಲು ಹಾಕಿದನು

ಗುರುನಾಥ ಬಂದುದನ್ನು ನೋಡಿ ಶ್ಯಾಮಲಾ ಒಳಗೆ ಹೋದಳು, ಸರಸ್ವತಿಯಮ್ಮನೇ ಆತನನ್ನು ಮಾತನಾಡಿಸಿದರು, 'ಏನು ಗುರುನಾಥ, ಇತ್ತ ಕಡೆಗೆ ಬರುವ ವಿಶೇಷವೇನು ? '

'ಮೊನ್ನೆ 'ಚಿಗುರಿದ ಕನಸು ಜಾರುವ ದಾರಿಯಲ್ಲಿ' ಕಾದಂಬರಿ ಶ್ಯಾಮಲೆಗೆ ಓದಲು ಕೊಟ್ಟಿದ್ದೆ ಅವು ಓದಿ ಮುಗಿಯಿತೇ, ಕೇಳೋಣವೆಂದು ಬಂದೆನಮ್ಮ'

ಅಂತೂ ಕತೆ ಕಾದಂಬರಿಯ ನೆವದಿಂದ ನಿನ್ನ ಅವಳ ಪ್ರೇಮ ವ್ಯವಹಾರ ನಡೆಯುತ್ತದೆನ್ನು ಅದರಲ್ಲೇನು ಅಡಗಿಸುವಂತಹ ಗುಟ್ಟು! ನಮ್ಮಂತಹವರ ಒಳ್ಳೆಯ ಮನೆತನದ ಹೆಸರು ನಿಮ್ಮಂತಹವರಿಂದ ಉಳಿಯುವುದೇ ಕಷ್ಟವಾಗಿದೆ ಈಗ ನಾನು ಮೊದಲೇ ಯೋಚಿಸಿದ್ದೆ– ನನ್ನ ಮಗ ರಾಜೀವ ಇದ್ದಾಗಲೇ ನೀನು ಶ್ಯಾಮಲೆಗೆ ಗಾಳ ಹಾಕುತ್ತ ಇದ್ದಿಯೆಂದು ಈಗಂತೂ ಅವನು ಹೋದನಲ್ಲ, ನಿನಗೆ ಸುಖವಾಯಿತು ವಿಧವೆಯರ ಉದ್ಧಾರ ನಿನ್ನ ಧ್ಯೇಯವಲ್ಲವೇ ? ಅದರಲ್ಲಿಯೂ ತರುಣ ವಿಧವೆಯರನ್ನು ಉದ್ಧಾರ ಮಾಡುವುದೇ ನಿನ್ನ ಮಿಗಿಲಾದ ಧ್ಯೇಯವೇನು ? ಶ್ಯಾಮಲೆಯಂತಹ ದರಗಿತ್ತಿಯರಂತೂ ನಿನ್ನ ಸೇವೆಯಿಂದಲೇ ನಕ್ಕು ಮೆರೆಯುತ್ತಿದ್ದಾರೆ ಗುರುನಾಥ ಅಂತೂ ಆ ಮನೆ ಮುರುಕ ಮಾರಿಗೆ ನೀನೊಂದು ದಾರಿ ಮಾಡಿಕೊಟ್ಟಿಯಷ್ಟೇ ? ನಿಮ್ಮ ಮನೆ ಹಾಳಾಗ... ಸೊಟ್ಟ ಮೂತಿಯ ಮಾನಗೇಡಿಗಳು ?

ಗುರುನಾಥನು ಮಾತಿಲ್ಲದವನಾಗಿ ನಿಂತುಬಿಟ್ಟನು ಶ್ಯಾಮಲೆ ಈ ಮಾತಿನ ಮೊಳಗನ್ನು ಕೇಳಿದಳು ತನ್ನ ಸೋದರಪ್ರೇಮದ ಪ್ರತೀಕ ಗುರುನಾಥನನ್ನು ವಿನಾಕಾರಣ ಹಳಿದು ಅವಮಾನಿಸುವ ಆ ನುಡಿಗಳನ್ನು ಕೇಳಿದಳು ಅವುಗಳೊಳಗಿನ ನಂಜು ಆವಳೆದೆಗೆ ನಾಟಿತು ತಲೆ ತಿರುಗಿದಂತಾಗಿ ಆಕೆ ನೆಲಕ್ಕುರುಳಿದಳು

ಇದನ್ನು ಕಂಡು ಸರಸ್ವತಿಯಮ್ಮ, "ಈ ಬಣ್ಣದ ಬೀಸಣಿಕೇರು ಸಿಂಗಾರವಾಗಿ ಬೀದಿ ಅಲೆದಾರು ಮನೆಗೆಲಸನೆಂದರೆ ತಲೆತಿರುಗು ಕಣ್ಣು ಕತ್ತಲೆ ' ಎಂದು ಅಗಣ್ಯವಾಗಿ ಆ ಕೋಮರೆಯನ್ನು ಕಂಡಳು

ಆದರೆ ಗುರುನಾಥ ಸುಮ್ಮನುಳಿದಾನೇ? ಆತ ಆಕೆಯ ಬಳಿಗೋಡಿ ಗಾಳಿ ಹಾಕತೊಡಗಿದನು ಮೂಲೆಯಲ್ಲಿದ್ದ ತಂಬಿಗೆಯ ನೀರನ್ನು ಕಣ್ಣಿಗೆ ಹಚ್ಚಿ, ತಲೆಗೆ ತಟ್ಟಿ ಎಚ್ಚರಗೊಳಿಸಿದನು

ಇದನ್ನು ಕಂಡ ಸರಸ್ವತಿಯಮ್ಮನ ಸಿಡುಕು ಹೆಚ್ಚಾಯಿತು ಕಂಡದ್ದು ಹೇಳಿದರೆ ಕೆಂಡದಂತಹ ಕೋಪವಂತೆ ಹಗಲಿರುಳು ಅವನ ಕೋಣೆಗೆ ಹೋಗಿ ವಿಲಾಸವಾಡಿರಲು ಆಗುತ್ತದೆ ಇಲ್ಲಿ ಮಾತ್ರ ನಿತ್ರಾಣ, ಮೂರ್ಛೆ ಈ ರಕ್ಕು ವಿದ್ಯೆ ಎಷ್ಟು ಕಾಲಕ್ಕಾದೀತು? ಗಂಡನನ್ನು ಕಳೆದುಕೊಂಡ ಎಷ್ಟೋ ಹೆಮ್ಮಕ್ಕಳನ್ನು ನಾನು ನೋಡಿದ್ದೇನೆ– ಒಬ್ಬರಾದರೂ ನಿನ್ನಂತಲ್ಲ– ನಿನ್ನ ಈ ವೇಷ, ಅಟ್ಟಹಾಸ, ಬಿಂಕಬಿನ್ನಾಣ ನೋಡಿದರೆ ಗಂಡ ಸತ್ತವಳೆಂದು ಹೇಳುವ ಧೈರ್ಯ ಯಾರಿಗೆ ಬಂದೀತು? ರಾಮ! ರಾಮ! ಗುರುನಾಥ ನಿನ್ನಡನೆಂದು ಕಾಣುತ್ತದೆ ಹೋಗು, ಅವನಲ್ಲಿಗೇ ಹೋಗು ಅವನೇ ನಿನ್ನ ಹೊಟ್ಟೆಬಟ್ಟೆಗೆ ಕೊಟ್ಟಾನು ನಡೆ ಮನೆಹಾಳ ಮೂದೇವಿ ' ಎಂದು ಜಗ್ಗಿ ಬುಸುಗುಟ್ಟಿದಳು

ಗುರುನಾಥನಿಗೆ ಈ ಅಮಾನುಷ ವರ್ತನೆ ಹಿಡಿಸಲಿಲ್ಲ ಆತ ರೇಗಿ ರಂಗೇರಿದ ಕೈ ನಡುಗಿಸುತ್ತ 'ಸರಸ್ವತಿಯಮ್ಮ, ನಾನು ಶ್ಯಾಮಲೆಯನ್ನು ಪ್ರೀತಿಸಿದ್ದೇನೆ, ಹೌದು. ಆವಳು ನನ್ನ ಸಹೋದರಿ, ನಾನವಳ ಸಹೋದರ. ಅವಳಂತಹ ಬಾಲವಿಧವೆಯರೆಲ್ಲ ನನ್ನ ವಾತ್ಸಲ್ಯಕ್ಕೆ ಒಳಗಾದವರೇ...... ನಿಮ್ಮ ಮಗನಿದ್ದಷ್ಟು ಕಾಲ ಮಾತ್ರ ಶ್ಯಾಮಲೆ ಈ ಮನೆಯವಳೆಂಬ ಕುಚೋದ್ಯ ದೃಷ್ಟಿ ದೂರ ಮಾಡಿ........ ನಿಮ್ಮ ಮಗಳಿಗೆ ಹೀಗಾದರೆ ನೀವೆಷ್ಟು ವ್ಯಥಿಸುತ್ತಿದ್ದೀರಿ....

ನಿಮ್ಮ ಶ್ಯಾಮಲೆ ದೈಹಿಕವಾದ ಎಲ್ಲಾ ಸುಖಗಳಿಗೂ ನೀರು ಕೊಡಬೇಕಾಯ್ತು ಆದರೆ ಆಕೆಯೂ ಮನುಷ್ಯಮಾತ್ರದವಳು ಅವಳಿಗೂ ಹೃದಯವಿದೆ ಲಾಲಸೆ ಯಿದೆ ಸಂತೋಷಪಡುವುದರಲ್ಲಿ ಆಸಕ್ತಿ ಇದೆ ಆಂಗಿಕ ಆಸಕ್ತಿಯೊಂದನ್ನು ಆಕೆ ವರ್ಜಿಸಬೇಕೆಂದರೆ ಯಾರೂ ಅಲ್ಲಗಳೆಯಬೇಕಿಲ್ಲ ಆದರೆ ಮಾನಸಿಕ ವಾಗಿಯೂ ಆಕೆ ರಂಜಿಸಿಕೊಂಡಿರಲಿಕ್ಕಿಲ್ಲವೇ ? ಹೃದಯವುಳ್ಳ ಹೆಣ್ಣುಮಗಳಾಕೆ ಪತಿಯೆನ್ನುವವನು ಮೃತನಾದ ಮಾತ್ರಕ್ಕೆ ಜೀವನ್ಮೃತ ಜೀವನ ನಡೆಸಬೇ ಕೆನ್ನುವವರೇ ನೀವು ? ಅದು ಈಗಿನ ದಿನಗಳಿಗೆ ಹೇಳಿದುದಲ್ಲ ಮನುಷ್ಯ ರಾದವರು ಶೀಲದ ಗಡಿ ಮೀರದೆ ಮನುಷ್ಯರಾಗಿ ಬಾಳಿಕೊಂಡಿರಲು ಯಾರೂ ಅವರನ್ನು ತಡೆಯಬಾರದು ನಿಮ್ಮ ಸಾಮಾಜಿಕ ರೂಢಿ ಮನುಷ್ಯತ್ವವನ್ನು ಮುರಿಯುವುದಾದರೆ ಅದನ್ನು ಮುರಿದು ಮೂಲೆಗೆಸೆವ ಬಲ ನನಗಿದೆ ನನ್ನ ದಾರಿ ನ್ಯಾಯವಾದುದು ಅದರಲ್ಲಿ ಮುನ್ನುಗ್ಗುವ ಧೈರ್ಯ, ದಿಟ್ಟತನ ನನ್ನದು . ತಡೆದು ಹೊಡೆವ ಪ್ರಯತ್ನ ಯಾರು ಮಾಡಿದರೂ ನಾನು ಜಗ್ಗಲಾರೆ ಶ್ಯಾಮಲೆ ನಿಮ್ಮ ಮನೆಗೆ ಮಾರಿಯಾದರೆ ಹೊರಗೆ ದೂಡಿ ಆದರೆ ಆ ಹೃದಯ ವುಳ್ಳ ಹೆಣ್ಣಿಗೆ ನನ್ನ ಮನೆಯ ದಾರಿ ತೆರೆದುಕೊಂಡಿದೆ ನಿಮಗೆ ಅನ್ನಕ್ಕೆ ಭಾರ ವಾದ ಈ ಶ್ಯಾಮಲಾದೇವಿ ನನ್ನ ಭಾಗಕ್ಕೆ ಭಾಗ್ಯಲಕ್ಷ್ಮಿ'

ಸರಸ್ವತಿಯಮ್ಮನ ಉಸಿರು ಮಿಸುಕಲಿಲ್ಲ ಗುರುನಾಥ ಶ್ಯಾಮಲೆಯೆಡೆಗೆ ತಿರುಗಿ, 'ಶ್ಯಾಮಾ, ನಡೆ ನಮ್ಮ ಮನೆಗೆ ಯಾರಿಗೂ ಬೇಡವಾದ ನೀನೇ ನನ್ನ ಮನ ಮನೆಗಳನ್ನು ಬೆಳಗಿಸುವ ಭಾಗ್ಯ ಶ್ರೀಯಾಗು ವಿಧವೆಯಾದರೂ ಹೃದಯ ಹೀನೆಯಲ್ಲವೆಂಬುದನ್ನು ಮರೆತು ಮಾನವತೆಗೆ ಮೀರಿ ವರ್ತಿಸುವ ಈ ಹೃದಯ ಹೀನರ ಹಂಗಿನಲ್ಲಿರಬೇಡ ಬಾ ' ಎಂದನು

ಶ್ಯಾಮಲೆ ಸೆರಗನ್ನು ಕೈಗೆತ್ತಿ ಕಣ್ಣೊರೆಸಿ ಕೃತಜ್ಞತೆಯನ್ನು ಸೂಚಿಸಿದಳು ಅವಳ ಕಣ್ಣ ಮಿಂಚು ಗುರುನಾಥನ ಎದೆಯಲ್ಲಿ ಪ್ರತಿಫಲಿಸಿತು ಒಂದಾದ ಎರಡು ಹೃದಯಗಳು ಒಂದನ್ನೊಂದು ಹಿಂಬಾಲಿಸಿದುವು

ದಾರಿಗಾಣದೆ ನಿಂತ ಸರಸ್ವತಿಯಮ್ಮ ಈ ಅನೂಹ್ಯ ಘಟನೆಗಾಗಿ ನೆಲವ-ನ್ನೊಮ್ಮೆ ಮುಟ್ಟಿದರು ಮಾತ್ರ, ಹಲ್ಲು ಕಡಿದರು ಮಾತ್ರ ...ಅದಕ್ಕಿಂತ ಹೆಚ್ಚೇ ನನ್ನೂ ಮಾಡುವ ತ್ರಾಣ ಅವರಲ್ಲಿರಲಿಲ್ಲ.



ಈ ಕಥಾ ಸಂಕಲನದ ಕರ್ತೃವಾದ ಶ್ರೀ ನಾರಾಯಣ ಭಟ್ಟರು ದಕ್ಷಿಣ ಕನ್ನಡ ಜಿಲ್ಲೆಯ ಉಪ್ಪುಂದದವರು ಚಿಕ್ಕಂದಿನಿಂದಲೂ ಗ್ರಂಥ ವ್ಯಾಸಂಗದಲ್ಲಿ ಮತ್ತು ಲೇಖನಕಲೆಯಲ್ಲಿ ಆಸಕ್ತರಾಗಿರುವವರು ಅವರು ಕೊಲ್ಹಾಪೂರ ರಾಜಾರಾಮ ಕಾಲೇಜಿನಲ್ಲಿ ಕೆಲಕಾಲ ಶಿಕ್ಷಣ ಪಡೆದು ಶಾಲಾ ಶಿಕ್ಷಕವೃತ್ತಿಯನ್ನು ಕೈಕೊಂಡರು ಈಗ "ಸ್ವಯಂಪ್ರಭಾ" ಸಾಹಿತ್ಯ ಮಾಲೆಯ ಚಾಲಕ ಸಂಪಾದಕರಾಗಿರುವರು **"ಭಾವಚಿತ್ರ" "ತೆಂಗಿನ ತವರು"** ಮೊದಲಾದ ಕೆಲವು ಪುಸ್ತಕಗಳನ್ನವರು ಹೊರತಂದಿದ್ದು, ಉತ್ತಮ ಲೇಖಕರೆಂಬ ಹೆಸರನ್ನು ಹೊಂದಿದ್ದಾರೆ ಈ **"ಚಿಗುರಿನ ಚಿತ್ರ"** ಅವರ ಕಥನಕಲೆಯ ಒಂದು ರಮ್ಯ ದರ್ಶನದಂತಿದೆ. ಕೈಬರೆಹದಲ್ಲಿರುವ ಅವರ ಕೆಲವು ಕಾದಂಬರಿಗಳು ಬೇಗನೇ ಬೆಳಕಿಗೆ ಬರಲಿವೆ